ನನ್ನ ಪೂಜ್ಯ ಗುರುವರ್ಯರಾದ

ಪ್ರಸಿದ್ಧ ವಾಗ್ಗೇಯಕಾರರಾದ

ಸಂಗೀತ ವೀಣಾ ವಿದ್ವಾನ್ ವಿ. ಕೃಷ್ಣಮಾಚಾರ್ಯರ ಪಾದದಡಿಯಲ್ಲಿ

ಮತ್ತು

ನನ್ನ ಪೂಜ್ಯ ಮಾತಾಪಿತೃಗಳ ಸ್ಮರಣೆಗಾಗಿ ಅತ್ಯಂತ ಭಕ್ತಿಪೂರ್ವಕ

ಸಮರ್ಪಣೆ.

# ಕರ್ಣಾಟಕ ಗಾನವಿದ್ಯಾ ಪ್ರದೀಪಿಕೆ



ಅದ್ಭುತ ವಾಗ್ಗೇಯಕಾರರು

## ವೀಣಾ ಕೃಷ್ಣಮಾಚಾರ್ಯರ

ವಿವಿಧ ಗೇಯ ರಚನೆಗಳು

[ಜತಿಸ್ವರ, ತಾನವರ್ಣ, ಪದವರ್ಣ, ಕೀರ್ತನೆ, ತಿಲ್ಲಾನ, ತರನ, ತಮಿಳ್ ಕೀರ್ತನೆ,
ಜಾವಡಿ ಮತ್ತು ದೇವರ ನಾಮ]

ಸಂಪಾದಕರು ಮತ್ತು ಪ್ರಕಾಶಕರು :

**ಗಾನಕೋಕಿಲೆ ಜಿ. ಚನ್ನಮ್ಮ**
"ಪ್ರಶಾಂತಿ" ವೆಂಕಟಪ್ಪ ಮಾರ್ಗ, ಟಾಸ್ಕರ್ ಟೌನ್, ಬೆಂಗಳೂರು



ಕ್ರಯ : ರೂ. 24

# Karnataka Gana Vidya Pradeepike

(Kannada)

**Various musical compositions of the renowned musician and composer V. KRISHNAMACHAR**

*Jatiswaras, Tanavarnas, Padavarnas, Keerthanas, Tillanas, Tarana, Tamil Keerthnas, Jhavadis and Devaranamas*

Edited with connotations and Published by
**Ganakokile G. CHANNAMMA**



Printed at Sri Vidya Press of
Sangeetha Vidya Sagara R. R. Keshava Murthy

# ನಿವೇದನೆ

ನನ್ನ ಪೂಜ್ಯ ಗುರುವರ್ಯ ಸಂಗೀತ ಸಾಹಿತ್ಯ ವೀಣಾ – ವಿದ್ವಾನ್ ಕೀರ್ತಿಶೇಷ ಶ್ರೀ ವಿ. ಕೃಷ್ಣಮಾಚಾರ್ಯರ ವಿವಿಧ ಸಂಗೀತ ರಚನೆಗಳನ್ನು ಸ್ವರಸಹಿತ ಮತ್ತು ಭಾವಾರ್ಥ ಸಹಿತ ಕ್ರೋಢೀಕರಿಸಿ ಸಂಪಾದಿಸಿ ಅಚ್ಚುಹಾಕಿಸುವ ಅಭಿಲಾಷೆಯು ಸುಮಾರು 18 ವರುಷ ಗಳಿಂದಲೂ ಇದ್ದಿತು. ಅದು ಈಗ ಕಾರ್ಯಗತವಾಗಿದೆ.

ಕೆಲವು ವರುಷಗಳ ಹಿಂದೆ ಶ್ರೀಮತಿ ಅರುಂಡೇಲ್ ರುಕ್ಮಿಣೀದೇವಿಯವರು ನನ್ನಲ್ಲಿದ್ದ ರಚನೆಗಳನ್ನು ಮದ್ರಾಸಿನಲ್ಲಿ ಅಚ್ಚುಹಾಕಿಸಿ ಪ್ರಕಟಿಸುವುದಾಗಿ ಡೆಲ್ಲಿ ಸಂಗೀತ – ನಾಟಕ ಅಕಡೆಮಿಯಲ್ಲಿ ನನ್ನನ್ನು ಕಂಡಾಗ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು ಮತ್ತು ಬೆಂಗಳೂರಿಗೂ ಒಂದು ಪತ್ರವನ್ನು ಬರೆದು ಕೇಳಿದ್ದರು.

ಗುರುಭಕ್ತಿಯ ಕಾಣಿಕೆಯಾಗಿ ಸ್ವತಃ ನಾನೇ ಅವನ್ನು ಪ್ರಕಟಿಸಬೇಕೆಂಬ ಭಾವನೆ ಯಿಂದ, ಅವರಿಗೂ ಅದೇ ಅಭಿಪ್ರಾಯದ ಒಂದು ಪತ್ರವನ್ನು ಬರೆದೆ. ಈ ಮಧ್ಯೆ ನನ್ನ ಅಳಿಲು ಸೇವೆಯ ಬಗೆ ಸಾರ್ವಜನಿಕವಾಗಿ ಏರ್ಪಾಡಾಗಿರುವ ಸನ್ಮಾನ ಸಮಾರಂಭದ

ಈ ಸಂಗೀತ ಗ್ರಂಥ ಪ್ರೌಢ ಶಾಲೆಗಳಿಗೆ, ಶಿಕ್ಷಕರ ತರಬೇತಿ ಸಂಸ್ಥೆಗಳಿಗೆ, ಅಧಿಕೃತವಾಗಿ ಮಂಜೂರಾಗಿದೆ. ಪ್ರೌಢಶಾಲೆಗಳು (ಹೈಸ್ಕೂಲುಗಳು) ಮತ್ತು ಉಪಾಧ್ಯಾಯರ ತರಬೇತಿ ಸಂಸ್ಥೆಗಳು (ಟೀಚರ್ಸ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ ಗಳು) ತಮ್ಮ ಗ್ರಂಥಾಲಯಗಳಿಗಾಗಿ ಈ ಸಂಗೀತ ಪುಸ್ತಕವನ್ನು ಕೊಂಡು ಕೊಳ್ಳಬೇಕಾಗಿ, ಕರ್ನಾಟಕ ಸರಕಾರದ ಪಠ್ಯಪುಸ್ತಕಗಳ ನಿರ್ದೇಶಕರು ತಮ್ಮ ಪ್ರಕಟಣೆ ಸಂಖ್ಯೆ TBC-8-74-75 ದಿನಾಂಕ 28 ಜನವರಿ 1975 ಮೂಲಕ ಅಧಿಕೃತವಾಗಿ ಶಿಫಾರಸು ಮಾಡಿದ್ದಾರೆ.

ಸನ್ಮಾನ
ಮತ್ತು
ಮಾಡುವ
ವಾದಗಳು
5 ವರುಷ
ರಚನೆಗಳ
ವರಿಗೂ,
ಗಳ ಈ

[illegible] ಯನ್ನು ಗುರುವರ್ಯರ ಮತ್ತು ನನ್ನ ಸಂಗೀತ ಕಲೋಪಾಸನೆ ಗಾಗಿ ತಮ್ಮ ತನು ಮನ ಧನಗಳಿಂದ ಸಹಾಯಮಾಡಿದ ನನ್ನ ಕೈಲಾಸವಾಸಿ ಪೂಜ್ಯ ಮಾತಾ ಪಿತೃಗಳನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಿ ಸಾದರಪಡಿಸುತ್ತೇನೆ

ಗುರುಗಳ ವಿವಿಧ ಸಂಗೀತ ರಚನೆಗಳು ಹೀಗಿವೆ :

ಜತಿಸ್ವರಗಳು, ಆದಿತಾಳ ವರ್ಣಗಳು, ಅಟ್ಟತಾಳ ವರ್ಣಗಳು, ಪದವರ್ಣ, ತೆಲುಗು ಮಧ್ಯಮಕಾಲ ಮತ್ತು ವಿಳಂಬಕಾಲ ಕೀರ್ತನೆಗಳು, ತಮಿಳು ಮಧ್ಯಮಕಾಲ ಮತ್ತು ವಿಳಂಬಕಾಲದ ಕೀರ್ತನೆಗಳು, ಮಣಿ ಪ್ರವಾಳ ಕೀರ್ತನೆ, ಜಾವಳಿಗಳು ತಿಲ್ಲಾನ ಮತ್ತು ತರಾನಗಳು, ಕನ್ನಡ ದೇವರ ನಾಮ.

ಅವರ ರಚನೆಗಳಲ್ಲಿ ಸಾಧಾರಣವಾಗಿ 'ಪದ್ಮಪುರಿವರದ' ಎಂಬ ಮುದ್ರೆ ಇದೆ. ಇದಲ್ಲದೆ ಗುರುಗಳಿಗೆ 'ವೇಮನ'ನಲ್ಲಿ ಬಹಳ ಅಭಿಮಾನ. ಕೆಲವು ಕೀರ್ತನೆಗಳಲ್ಲಿ 'ವೇಮನ್ನ' ಎಂಬ ಮುದ್ರೆಯನ್ನೂ ಬಳಸಿದ್ದಾರೆ. ಇನ್ನೂ ಕೆಲವು ಕಡೆ ಅವರು ರಚಿಸಿದ ಸಂಗೀತ ರಚನೆಗಳಲ್ಲಿ 'ಪಾಂಡುರಂಗ', 'ರಂಗ', 'ತಿರುವೇಂಗಡ', 'ವರದ', 'ವಸಂತಪುರೀಶ'

ಮೊದಲಾದ ಅಂಕಿತವನ್ನೂ ಕೊಟ್ಟಿದ್ದಾರೆ. ಕೆಲವು ತಮಿಳು ಸಂಗೀತ ರಚನೆಗಳಲ್ಲಿ ಚಿದಂಬರಂ 'ತಿಲ್ಲೈ ನಟರಾಜ' ಎಂಬ ಅಂಕಿತವೂ ಇದೆ. ಈ ಕೀರ್ತನೆಗಳು 1941 ರಲ್ಲಿ ತಮಿಳು ಸಂಗೀತ-ಸಾಹಿತ್ಯ ಸ್ಪರ್ಧೆಗಾಗಿ ಹಾಡಲು ರಚಿಸಿದವು.

ಗುರುಗಳ ರಚನೆಯಲ್ಲಿ ಬಳಸಿರತಕ್ಕ ರಾಗಗಳು ಕರ್ನಾಟಕ ರಾಗಗಳೇ ಅಲ್ಲದೆ, ಹಿಂದುಸ್ಥಾನಿ ರಾಗಗಳನ್ನೂ ತೆಗೆದುಕೊಂಡಿರುವರು. ಕೀರ್ತನೆಗಳಲ್ಲಿ ಹಿಂದುಸ್ಥಾನಿ ಕಮಾಚ್, ಜಾವಳಿಗಳಲ್ಲಿ ಹಿಂದುಸ್ಥಾನಿ ಅಸಾವೇರಿ, ಹಿಂದುಸ್ಥಾನಿ ಭೈರವಿ, ಕೇದಾರ್, ಹಮೀರ್ ಕಲ್ಯಾಣಿ, ದೇಸ್, ಬಾಗೇಶ್ರೀ, ಜೋಗಿಯಾ, ಮಿಶ್ರಝಂಜೂಟಿ, ಪೀಲು ಮುಂತಾದುವು. ತಾಳಗಳು ಖಂಡಚಾಪು, ಮಿಶ್ರಚಾಪು, ತಿಶ್ರನಡೆ, ರೂಪಕ, ಅದಿ, ಹಿಂದುಸ್ಥಾನಿಯಲ್ಲಿನ ತ್ರಿತಾಳ್-ಇವನ್ನು ಅವರ ಸಂಗೀತ ರಚನೆಗಳಲ್ಲಿ ಕಾಣಬಹುದು. ಅವರು ತಮ್ಮ ಕೆಲವು ತೆಲುಗು ಕೀರ್ತನೆಗಳನ್ನು ಕನ್ನಡ ಭಾಷೆಗೆ ಭಾಷಾಂತರಿಸಬೇಕೆಂದು ಬಹಳವಾಗಿ ಆಶಿಪಟ್ಟಿದ್ದರು. ಗುರುಗಳು ದಿವ್ಯಸಿದ್ಧಿಯ ವಾಗ್ಗೇಯಕಾರರಾಗಿದ್ದರೆಂಬುದು ನನ್ನ ಪ್ರತ್ಯಕ್ಷ ಅನುಭವದ ಮಾತು.

ಇವರ ಶೈಲಿಯಲ್ಲಿನ ಒಂದು ವಿಶೇಷವೆಂದರೆ ವೀಣೆಯಲ್ಲಿ ಸೂಕ್ಷ್ಮಗಮಕಗಳು ಹೇಗೆ ನುಡಿಯುತ್ತಿದ್ದುವೋ ಹಾಗೆಯೇ ಹಾಡಲು ಸಾಧ್ಯವಾಗುತ್ತವೆ. ಇದು ಅವರಲ್ಲಿ ಪಾಠ ಮಾಡಿದವರಿಗೆ ಮಾತ್ರ ಪರಿಚಯವೇ ಹೊರತು ಬರೀ ಪುಸ್ತಕದ ಸ್ವರಮಟ್ಟು ಸಹಾಯದಿಂದ ಹಾಡಲು ಸಾಧ್ಯವಾಗದಿರಬಹುದು. ಕೆಲವು ಕೀರ್ತನೆಗಳಂತೂ ಬಾಲ್ಯಪಾಠದ ವಿದ್ಯಾರ್ಥಿಗಳಿಗೂ ಸುಲಭವಾಗುವಂತೆ ಖಂಡಚಾಪು ಮತ್ತು ಮಿಶ್ರಚಾಪು ತಾಳಗಳಲ್ಲಿ ರಚಿತವಾಗಿವೆ. ಇನ್ನು ಕೆಲವು ಕೀರ್ತನೆಗಳು, ಸಂಪೂರ್ಣ ರಾಗಗಳ ಲಕ್ಷಣವರಿತು ಅನೇಕ ಸಂಗತಿಗಳನ್ನು ಹೊಂದಿ, ವಿದ್ಯಾರ್ಥಿಗಳು ಅಂತಹ ಹತ್ತು ಕೀರ್ತನೆಗಳನ್ನು ಪಾಠಮಾಡಿದಲ್ಲಿ ಬಹುಬೇಗ ಶಾರೀರದಲ್ಲಿ ನುಡಿಕಾರಗಳು ನುಡಿದು ಅಭ್ಯಾಸದ ಬಲವು ಅರಿವಾಗುವಂತೆ ಇವೆ. ಆದರೆ ಈ ಗ್ರಂಥದಲ್ಲಿನ ಕೆಲವು ಸಂಗೀತ ರಚನೆಗಳಲ್ಲಿ ಸಂಗತಿಗಳನ್ನು ಕಡಿಮೆಮಾಡಿದೆ. ಇದು ಗ್ರಂಥ ವಿಸ್ತಾರದ ಭೀತಿಯಿಂದ. ಈ ಕೃತಿಗಳು ಗುರುಗಳ ಹೃದಯಾಂತರಾಳದಿಂದ ಹೊರಹೊಮ್ಮಿವೆ, ಮನದಾಳದಿಂದ ಉಕ್ಕಿಬಂದಿವೆ. ಅವರಿಗೆ ಅನಾರೋಗ್ಯ ಮತ್ತು ಅಂಗವಿಕಲತೆ ಉಂಟಾಗಿತ್ತೆಂಬುದು ಇಲ್ಲಿ ಗಮನಿಸತಕ್ಕ ಅಂಶವಾಗಿದೆ.

ಅವರು ರಚಿಸಿದ ನಠಭೈರವಿ ರಾಗದ 'ಏಪಾಪಮುಚೇಸಿನಂದುಕೈ' ಎಂಬುದು ನೋವುಕಂಡ ಕೀರ್ತನೆ ಅನೇಕ ಕಡೆಗಳಲ್ಲಿ ತಮ್ಮ ಅಸಹಾಯಕತೆಯನ್ನು ಭಗವಂತನಲ್ಲಿ ತೋಡಿಕೊಂಡಿದ್ದಾರೆನ್ನಬಹುದು. ಅನೇಕ ರಚನೆಗಳಲ್ಲಿ ಅವರು ತಮ್ಮ ದೈನ್ಯತೆಯನ್ನು ಪರಿಪರಿಯಾಗಿ ನಿರೂಪಿಸಿಕೊಂಡಿದ್ದಾರೆ. ಜಾವಳಿಗಳಲ್ಲಿ ಕೆಲವು ತಾವು ಕಂಡದ್ದು, ಕೆಲವು ಅನುಭವಿಸಿದುದು ಮತ್ತೆ ಕೆಲವು ಲೋಕ ರೂಢಿಯವು. ಮುಚ್ಚುಮರೆಯಿಲ್ಲದೆ ಸಾಹಿತ್ಯದಲ್ಲಿ ಆ ಭಾವನೆಗಳನ್ನು ತುಂಬಿದ್ದಾರೆ.

ಇವೂ ಅಲ್ಲದೆ, ಕೆಲವು ಲೌಕಿಕ ವ್ಯವಹಾರಗಳು ತಮಗೆ ಮತ್ತು ತಮ್ಮ ವೃತ್ತಿಗೆ ಬಾಧಕ ಉಂಟುಮಾಡಲು ಕೆಲವು ವ್ಯಕ್ತಿಗಳು ತೊಡಗಿ, ಸೋಲನ್ನು ಕಂಡರು ಎಂಬುದೂ ವ್ಯಕ್ತವಾಗುತ್ತದೆ ಕೆಲವು ಕೃತಿಗಳಲ್ಲಿ. ಅವರು ಸುಮಾರು 300-400ಕ್ಕೂ ಹೆಚ್ಚಿನ ರಚನೆಗಳನ್ನು ಮಾಡಿದ್ದರು. ಈ ಪುಸ್ತಕದಲ್ಲಿ ಸ್ವರಸಹಿತ ಅಚ್ಚುಕಂಡಿರುವ ಕೀರ್ತನೆಗಳೆಲ್ಲವೂ, ನಮ್ಮಗಳ ಸಮಕ್ಷಮವೇ ರಚಿಸಿ ನಮ್ಮಗಳಿಗೆ ಆಗಿಂದಾಗಲೇ ಪಾಠಮಾಡಿಸಿದ ಸಂಗೀತ ರಚನೆ

ಗಳು. ಒಂದೊಂದು ದಿನ 4-5 ರಚನೆಗಳನ್ನು ಪಾಠಮಾಡಬೇಕಾಗಿ ಒಂದು ದಿನವಿಡೀ ಅಭ್ಯಾಸಮಾಡುತ್ತಿದ್ದೆವು. ಕೆಲವು ತಾನವರ್ಣಗಳು 1926 ರಲ್ಲಿ ರಚನೆಯಾದವುಗಳು. ನಾವುಗಳು 1932 ರಿಂದ 1935ರ ವರೆಗೆ ಆದ ಅನೇಕ ರಚನೆಗಳನ್ನು ನಾವು ಅಂದಂದೇ ಪಾಠಮಾಡುತ್ತಿದ್ದೆವು.

ನಾನು ಪಾಠಮಾಡಿದ ಎಲ್ಲಾ ರಚನೆಗಳನ್ನೂ ನನಗೆ ಜ್ಞಾಪಕವಿದ್ದ ಮತ್ತು ಅಭ್ಯಾಸದಲ್ಲಿದ್ದವುಗಳನ್ನೇ ಈ ಪುಸ್ತಕದಲ್ಲಿ ವರ್ಣಮಟ್ಟು ಸಹಿತ ಅಚ್ಚುಹಾಕಿಸಿದ್ದೇನೆ.

ಮದ್ರಾಸ್ ಸಂಗೀತ ನಾಟಕ ಅಕಾಡೆಮಿಯವರು ಕೆಲವು ಸಂಗೀತ ರಚನೆಗಳನ್ನು ಅಚ್ಚು ಹಾಕಿಸಿರುವರು. ಅವುಗಳೆಲ್ಲ ತಮಿಳು ಭಾಷೆಗಳಲ್ಲಿ ಬರೆದಿದ್ದವುಗಳಾಗಿವೆ. ಅವು ದೇವನಾಗರಿ ಮತ್ತು ತಮಿಳು ಲಿಪಿಗಳಲ್ಲಿ ಮುದ್ರಿತವಾಗಿವೆ. ಅವರು ತಮಿಳು ಕುಟುಂಬದಲ್ಲಿ ಮತ್ತು ತಮಿಳು ರಾಜ್ಯದಲ್ಲಿ ಹುಟ್ಟಿ ಬೆಳೆದು, ಕರ್ನಾಟಕ ದೇಶದಲ್ಲಿ ಬಂದು ನೆಲೆಸಿ, ಬಹುತೇಕವಾಗಿ ತೆಲುಗು ಭಾಷೆಯಲ್ಲಿ ಸಂಗೀತ ರಚನೆಮಾಡಿದರೆಂಬುದೂ ಒಂದು ಅಸಾಮಾನ್ಯವಾದ ಸಂಗತಿಯಾಗಿದೆ.

ಒಂದು ಸಲ ಗುರುಗಳು ಡಾ|| ಡಿ. ವಿ. ಗುಂಡಪ್ಪನವರ "ಮಂಕುತಿಮ್ಮನ ಕಗ್ಗ"ದಲ್ಲಿನ ಕೆಲವು ಪದ್ಯಗಳಿಗೆ ವರ್ಣಮಟ್ಟು ಹಾಕಿ ಅದರ ಸಮಕ್ಷಮ ಒಂದು ಘಂಟೆ ಕಾಲ ಹಾಡಿದರು. ಅದರಲ್ಲಿ "ಪೂಸರದಿ ಕಾಂತಿ ಸೌರಭ" ಎಂಬ ಕೃತಿಯೂ ಒಂದು. ದುರದೃಷ್ಟದಿಂದ ಆಗ ನಾವು ಅವುಗಳನ್ನು ಅವರ ಶೈಲಿಯ ವರ್ಣಮಟ್ಟಿನಲ್ಲಿ ಬರೆದಿಡದೆ ಮೋಸಹೋದೆವು. ಅದಕ್ಕಾಗಿ ಈಗ ಪಶ್ಚಾತ್ತಾಪವಾಗುತ್ತಿದೆ. ಗುರುಗಳು ಮತ್ತು ಅವರ ಹಿರಿಯ ಸಹೋದರರುಗಳಾದ ಟೈಗರ್ ವರದಾಚಾರ್ಯರು ಮತ್ತು ಶ್ರೀ ಕೆ. ವಿ. ಶ್ರೀನಿವಾಸಯ್ಯಂಗಾರ್ ಇವರು ಆಗಿನ ಕಾಲದಲ್ಲಿ ತ್ರಿಮೂರ್ತಿಗಳೆಂದು ಹೆಸರಾಂತು, ಅನೇಕ ರಚನೆಗಳಲ್ಲಿ ತ್ಯಾಗರಾಜ ಅಂಕಿತವಿಟ್ಟು ಹಾಡಿದ್ದರು. ಅದು ಕೆಲಕಾಲದ ಮೇಲೆ ಸಂಗೀತ ಪ್ರಪಂಚಕ್ಕೆ ಗೊತ್ತಾಯಿತು. ಅವುಗಳಲ್ಲಿ ಸಿಂಹೇಂದ್ರ ಮಧ್ಯಮ ರಾಗದಲ್ಲಿನ "ನತಜನ", "ನೀದುಚರಣಮುಲೆ", ಹರಿಕಾಂಭೋಜಿ ರಾಗದ "ವಿನತಾಸುತವಾಹನುಡೈ" ಇವುಗಳು ಬಹಳ ಪ್ರಸಿದ್ಧವಾದ ಕೀರ್ತನೆಗಳು.

ಗುರುಗಳು ಅನೇಕ ವಾದ್ಯಗಳನ್ನು ನುಡಿಸುವುದರಲ್ಲಿ ನೈಪುಣ್ಯತೆ ಪಡೆದಿದ್ದರು. ನಾಗಸ್ವರ, ಕೊಳಲು, ಮೃದಂಗ, ಡೋಲು ನುಡಿಸುವುದನ್ನು ನಾವು ನೋಡಿದ್ದೆವು. ನಾಟ್ಯಶಾಸ್ತ್ರದಲ್ಲಿಯೂ ಅವರು ಬಹಳವಾಗಿ ನುರಿತಿದ್ದರು. ಇದಕ್ಕೆ ಇವರು ಹಾಡುತ್ತಿದ್ದ ಕ್ಷೇತ್ರಯ್ಯ ಪದಗಳೇ ಸಾಕ್ಷಿ. ನನಗೆ ಅನೇಕ ಪದಗಳನ್ನೂ, ದೀಕ್ಷಿತರ, ಶ್ಯಾಮಾಶಾಸ್ತ್ರಿಗಳ, ಮೈಸೂರು ಸದಾಶಿವರಾಯರ, ಮೈಸೂರು ಕೆ. ವಾಸುದೇವಾಚಾರ್ಯರ ಕೃತಿಗಳನ್ನು ಪಾಠಮಾಡಿಸಿದ್ದರು. ತಮ್ಮ ಕೃತಿಗಳನ್ನೇ ಅಲ್ಲದೆ, ಇತರ ವಾಗ್ಗೇಯಕಾರರ ತಾನವರ್ಣಗಳು ಸುಮಾರು 30ಕ್ಕೂ ಹೆಚ್ಚಾಗಿ ನಮಗೆ ಬೋಧಿಸಿದ್ದರು. ಅನೇಕವಾಗಿ ರೇಡಿಯೋ ಮುಂತಾದ ಕಚೇರಿಗಳಲ್ಲಿ ಗುರುಗಳ ರಚನೆಗಳನ್ನೇ ಹಾಡಲು ಕೋರಿಕೆಗಳು ಬರುತ್ತಿದ್ದವು. ಮದ್ರಾಸಿನ ಕೆಲ ವ್ಯಕ್ತಿಗಳು ಬೆಂಗಳೂರಿಲ್ಲಿ ಬಂದಾಗ ಕೃಷ್ಣಮಾಚಾರ್ಯರ ಶೈಲಿಯನ್ನು ತಾವು ಪಾಠಮಾಡಬೇಕೆನ್ನುವ ಉದ್ದೇಶದಿಂದ ನನ್ನಲ್ಲಿ ನಾಲ್ಕಾರು ತಿಂಗಳು ಅಭ್ಯಾಸ ಮಾಡಿ ಹೋಗಿರುವರು. ಇಂತಹ ಅಸಾಧಾರಣ ವ್ಯಕ್ತಿತ್ವದ ಮತ್ತು ಸಿದ್ಧಿಯ ವಾಗ್ಗೇಯಕಾರರ ಕೃತಿಗಳನ್ನು ಅಚ್ಚುಹಾಕಿಸಿ ಆ ಮೂಲಕ ಕೃತಾರ್ಥಳಾಗುವ ಭಾಗ್ಯ ನನ್ನದಾಗಿರುವುದು ನನ್ನ ಪೂರ್ವ ಜನ್ಮದ ಸುಕೃತವೆಂದೇ ಭಾವಿಸಿದ್ದೇನೆ.

ಇನ್ನು ಗುರುಗಳ ಕೆಲವು ರಚನೆಗಳನ್ನು ಮೂಲಪ್ರತಿಯಿಂದ ಅಚ್ಚುಹಾಕಲು ಸುಲಭ-ವಾಗುವಂತೆ ಪ್ರತಿ ಲಿಪಿ ಮಾಡುವ ಕಾರ್ಯದಲ್ಲಿ ಸಹಕರಿಸಿದ ನನ್ನ ಶಿಷ್ಯೆ ಮತ್ತು ಸಹೋದ್ಯೋಗಿನಿಯಾದ ಶ್ರೀಮತಿ ಇ. ಪಿ. ಅಲಮೇಲು ಮತ್ತು ಇತರ ಶಿಷ್ಯೆಯರಿಗೆ ನಾನು ಆಭಾರಿಯಾಗಿದ್ದೇನೆ. ಕೆಲವು ತಮಿಳು ರಚನೆಗಳನ್ನು ಶಾಂತಿನಿಕೇತನದಲ್ಲಿರುವ ನನ್ನ ಗುರುಗಳ ಶಿಷ್ಯಳಿಂದ ಬರೆದು ತರಿಸಿಕೊಟ್ಟ ಸಂಗೀತ ವಿದುಷಿ ಕೆ. ಟಿ. ಕಮಲ ಇವರಿಗೂ ನನ್ನ ಕೃತಜ್ಞತೆಗಳು. ತಮಿಳು ರಚನೆಗಳಲ್ಲಿನ ಕೆಲವು ಕ್ಲಿಷ್ಟಪದಗಳನ್ನು ಅರ್ಥೈಸಲು ನೆರವಾದ ನನ್ನ ಶಿಷ್ಯೆಯರಾದ, ಶ್ರೀಮತಿ ರಾಜಲಕ್ಷ್ಮಿ ನಾರಾಯಣ್, ಶ್ರೀಮತಿ ಮಂಗಳಗೌರಿಶರ್ಮ (ಇವರು ಪ್ರಸಿದ್ಧ ಸಂಗೀತ ವಿದುಷಿ ಡಿ. ಕೆ. ಪಟ್ಟಾಮ್ಮಾಳ್‌ರವರ ಸಂಬಂಧಿ) ಮತ್ತು ಶ್ರೀಮತಿ ಇ. ಪಿ. ಅಲುಮೇಲು ಇವರಿಗೂ ಧನ್ಯವಾದಗಳು. ಕೆಲವು ಹಿಂದೂಸ್ಥಾನಿ ರಾಗಗಳಲ್ಲಿನ ಸಂಶಯವನ್ನು ನಿವಾರಣೆ ಮಾಡಿದ, ಹಿಂದೂಸ್ಥಾನಿ ಸಂಗೀತ ವಿದ್ವಾಂಸರಾದ ಶ್ರೀ ಶೇಷಾದ್ರಿ ಗವಾಯ್ ಇವರಿಗೆ ನನ್ನ ಅಭಿನಂದನೆಗಳು.

ಈ ಪುಸ್ತಕದಲ್ಲಿನ ಕೃತಿಗಳ ಕೆಲವು ಬರವಣಿಗೆಯ ದೋಷಗಳನ್ನು ತಿದ್ದಿ, ತಾವೇ ಶ್ರದ್ಧೆವಹಿಸಿ ಇಷ್ಟು ಸುಂದರವಾಗಿ ಬಹುಬೇಗನೆ ಅಚ್ಚುಹಾಕಿರುವ ಸಂಗೀತ ಸಾಹಿತ್ಯ ಶಿರೋಮಣಿ ಶ್ರೀ ಆರ್. ಆರ್. ಕೇಶವಮೂರ್ತಿಗಳಿಗೆ ನನ್ನ ಶ್ರದ್ಧಾಪೂರ್ವಕದ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತೇನೆ. ಗಾನ ಸರಸ್ವತಿಯು ಇವರಿಗೆಲ್ಲ ಸನ್ಮಂಗಳವನ್ನುಂಟುಮಾಡಲಿ ಎಂದು ಪ್ರಾರ್ಥಿಸುತ್ತೇನೆ.

ಸಂ—ಜಿ. ಚನ್ನಮ್ಮ

# —ಅಭಿನಂದನೆ—

ಮಧುರ-ಮುಗ್ಧವಾದ ಈ ಗೇಯ ರಚನೆಗಳನ್ನು ಶ್ರದ್ಧಾಭಕ್ತಿಗಳಿಂದ ಕಾಪಾಡಿ, ಸಂಪಾದಿಸಿ ಮತ್ತು ಪ್ರಕಟಿಸಿ, ಶ್ರೀಮತಿ ಚನ್ನಮ್ಮನವರು ಕರ್ನಾಟಕ ಸಂಗೀತ ಕಲಾಭಿಮಾನಿಗಳ ಕೃತಜ್ಞತೆಗೂ ವಾಗ್ಗೇಯಕಾರರಾದ ತಮ್ಮ ಗುರುಗಳು ಕೀರ್ತಿಕಾಯ ಶ್ರೀ ವೀಣೆ ಕೃಷ್ಣಮಾಚಾರ್ಯರ ಮಂಗಳಾಶಾಸ್ಯಕ್ಕೂ ಪಾತ್ರರಾಗಿದ್ದಾರೆ.

ಈ ಶತಾಬ್ಧಿಯಲ್ಲಿ ಕರ್ನಾಟಕ ಸಂಗೀತ ಪ್ರಪಂಚದಲ್ಲಿ ಕೃಷ್ಣಮಾಚಾರ್ಯರು, ಅವರ ಅಣ್ಣಂದಿರು ಕೆ. ವಿ. ಶ್ರೀನಿವಾಸಯ್ಯಂಗಾರ್ಯರು, ಅವರ ಅಣ್ಣಂದಿರು ಟೈಗರ್ ವರದಾಚಾರ್ಯರು, ಈ ಮೂವರೂ ಸುಪ್ರಸಿದ್ಧರಾದ ಕಲಾವಿದರಾಗಿದ್ದರು. ವರದಾಚಾರ್ಯರ ಹಾಡಿಕೆ ಎಷ್ಟು ಶಾಸ್ತ್ರಬದ್ಧವೋ, ಅಷ್ಟು ಸ್ವತಂತ್ರವಾದದ್ದು. ಯಾರಿಗೂ ಅನುಕರಿಸಲಾಗದ ದಾರಿ ಅವರದು. ಅವರ ಪ್ರತಿಭೆ ನವನವೋನ್ಮೇಷಶಾಲಿನಿ. ಈಗಿನ ಸಂಗೀತಗಾರರಲ್ಲಿ ಅವರ ಶಿಷ್ಯರಲ್ಲದವರು ಕೆಲವರು ಮಾತ್ರವೇ. ಸದಸ್ಸುಗಳಲ್ಲಿ ಮಾತ್ರವಲ್ಲದೆ ಎಲ್ಲಿ ತೋರಿದರೆ ಅಲ್ಲಿ, ಪಕ್ಕವಾದ್ಯಗಳ ಅಪೇಕ್ಷೆ ಇಲ್ಲದೆ, ಕಾಲನಿಯಮಕ್ಕೊಳಗಾಗದೆ, ಮನಸ್ಸಿಗೆ ಬಂದ ಯಾವುದೋ ರಾಗದ ಯಾವುದೋ ರಚನೆಯ ತುಣಕನ್ನು ಹಿಡಿದು ಅಲಕ್ಷ್ಯದಿಂದ ಲೀಲಾಜಾಲವಾಗಿ ಹಂಚಿಹರಡುವುದು ಅವರ ಹಾಡಿಕೆಯ ವಿಭ್ರಮವಿಲಾಸ. ಮಿಂಚಿನಂತೆ ಆಕಸ್ಮಿಕವಾಗಿ ಹೊರಸೂಸಿ ಮರೆಯಾಗುವುದು ಅವರ ಕಲ್ಪನೆಗಳ, ಭಾವನೆಗಳ ಇಂದ್ರಜಾಲ, ಆಗ ಕೇಳಿದವರಿಗೆ ಉಂಟು, ಅಷ್ಟೆ: ಕೈಗೆ ನಿಲುಕುವುದಿಲ್ಲ ಟೈಗರ್‌ರವರ ಸಂಗೀತ. ಆದ್ದರಿಂದ ಅದು ಅವರ ಹಿಂದೆಯೇ ಹೊರಟುಹೋಯಿತು. ಅದಕ್ಕೊಂದು ರೂಪುಕೊಟ್ಟು ನಿಲ್ಲುವಂತೆ ಮಾಡಲು ಅದಕ್ಕೆ ಅವರಿಗೇ ಸಾಧ್ಯವಾಗಲಿಲ್ಲ. ಅವರದು ನಿಷ್ಕಲ್ಮಶವಾದ ಆಧ್ಯಾತ್ಮಿಕ ಹೃದಯ. ಮಗುವಿನಂತೆ ಮೃದುವಾದದ್ದು.

ಶ್ರೀನಿವಾಸಯ್ಯಂಗಾರ್ಯರದು ಆಳವಾದ ಶಾಸ್ತ್ರ ವ್ಯಾಸಂಗ, ಶ್ರುತಿ, ಸ್ವರ, ಗ್ರಾಮ, ಮೂರ್ಛನೆ, ತಾಳ ಮುಂತಾದ ಶಾಸ್ತ್ರ ವಿಷಯಗಳಲ್ಲಿ ಅವರ ಪರಿಶ್ರಮ ಅಪಾರವಾದದ್ದು. ತ್ಯಾಗರಾಜರು, ದೀಕ್ಷಿತರು ಮುಂತಾದ ಮಹನೀಯರ ರಚನೆಗಳನ್ನು ಪ್ರಾಮಾಣಿಕವಾಗಿ ಸಂಗ್ರಹಿಸುವುದರಲ್ಲಿ ಅವರ ಶ್ರದ್ಧಾಭಕ್ತಿಗಳೂ ಹಾಗೆಯೇ. ಅವರ ಫಲವಾಗಿ 'ಗಾನಭಾಸ್ಕರ', 'ತ್ಯಾಗರಾಜಹೃದಯ' ಮೊದಲಾದ ಅನೇಕ ಗ್ರಂಥಗಳನ್ನು ರಚಿಸಿ ಅವರು ಪ್ರಕಟಿಸಿದರು. ವಿಶೇಷವಾಗಿ ತ್ಯಾಗರಾಜರಲ್ಲಿ ಅವರ ಸೇವೆ ಚಿರಸ್ಮರಣೀಯವಾದದ್ದು. ನನಗೆ ಅವರ ಪರಿಚಯ ಅದರ ಗ್ರಂಥಗಳಿಂದ ಮಾತ್ರವೇ. ಅವುಗಳಿಂದ ನನಗೆ, ನನ್ನಂತೆ ಸಾವಿರಾರು ಮಂದಿ ಸಂಗೀತ ವ್ಯಾಸಂಗಿಗಳಿಗೆ ಆದ, ಆಗುತ್ತಿರುವ ಉಪಕಾರ ಅಷ್ಟಿಷ್ಟಲ್ಲ. ತೆಲುಗು, ತಮಿಳು, ಇಂಗ್ಲೀಷು ಮತ್ತು ಸಂಸ್ಕೃತ ಭಾಷೆಗಳಲ್ಲಿ ಅವರ ಪಾಂಡಿತ್ಯ ವಿಶಾಲವಾದದ್ದು.

ಕೃಷ್ಣಮಾಚಾರ್ಯರ ಪರಿಚಯ ನನಗೆ ಲಭಿಸಿದ್ದು ಒಂದೇ ಸಲ. ಅದೂ ಅವರ ಉತ್ತರ ವಯಸ್ಸಿನಲ್ಲಿ. ಕೆಲವು ನಿಮಿಷಗಳಷ್ಟು ಮಾತ್ರವೇ. ಅವರ ಹಾಡಿಕೆ "ಪುರುಷ ಮೋಹಿನಿ" ಎಂದು ಆಗಿನ ಸಂಗೀತ ವಿದ್ವಾಂಸರಲ್ಲೇ ಅಭಿಪ್ರಾಯವಿದ್ದುದ್ದು ಕೇಳಿಬಲ್ಲೆ. ಅವರ ಭೇಟಿಯಾದಾಗ, ಅನಾರೋಗ್ಯದಿಂದ ಪರಾಧೀನರಾಗಿದ್ದರೂ ನಮಗಾಗಿ ಒಂದೆರಡು ಸ್ವಂತ ರಚನೆಗಳನ್ನು ಹಾಡಿ ತೋರಿಸಿದರು. ಅವರಿಗೆ ಬಂದಿದ್ದ ಆ ಕೀರ್ತಿ ಅತಿಶಯೋಕ್ತಿಯಲ್ಲವೆಂಬುದು ನಮಗಾಗ ಮನದಟ್ಟಾಯಿತು. ರಕ್ತಿಯಾದ ಒಳ್ಳೆಯ ಕಣೆಯ ಶಾರೀರ. ಸ್ಪಷ್ಟವಾದ ಸ್ವರಸಾಹಿತ್ಯಗಳ ಉಚ್ಚಾರಣೆ, ಧಾರಾಳವಾಗಿ ನಿಶ್ಶಂಕೆಯಾದ,

ನಿರ್ವಿಕಾರವಾದ ಧೋರಣೆ, ವಿಕಸಿತವಾದ ನಗುಮೊಗ ಇವು ಆ ಹಾಡಿಕೆಯ ಮುಖ್ಯ ಗುಣಗಳಾಗಿ ಕಂಡುಬಂದುವು.

ತಮ್ಮ ಕಲಾಪ್ರತಿಭೆಗೆ ಗೇಯ ರಚನೆಯ ರೂಪು ಕೊಟ್ಟು, ಸ್ಥಿರವಾಗಿ ನಿಲ್ಲಿಸಲು ಪ್ರಯತ್ನ ಮಾಡಿದವರು ಕೆಲವರೇ. ಈ ಶತಾಬ್ದಿಯಲ್ಲಿ ರಾಮನಾಡ್ ಶ್ರೀನಿವಾಸಯ್ಯಂಗಾರ್, ಶೇಷಣ್ಣನವರು, ವಾಸುದೇವಾಚಾರ್ಯರು, ಮುತ್ತಯ್ಯ ಭಾಗವತರು, ಮುಂತಾದ ಕೆಲವರನ್ನು ಎಣಿಸಿ ಹೇಳಬಹುದು. ಆ ಪಂಕ್ತಿಯಲ್ಲಿ ಕೃಷ್ಣಮಾಚಾರ್ಯರೂ ಸೇರಿಕೊಳ್ಳ ತಕ್ಕವರೆನ್ನುವುದು ಈ ಸಂಪುಟದ ಪ್ರಕಟಣೆಯಿಂದ ಸ್ಪಷ್ಟವಾಗಿದೆ. ಆಚಾರ್ಯರ ಜೀವನ ಕಾಲದಲ್ಲೇ ತಮ್ಮ ರಚನೆಗಳನ್ನು ಪ್ರಕಟಿಸಬೇಕೆಂದು ಆಸೆಗೊಂಡಿದ್ದರಂತೆ. ಆಗ ಒಂದೆರಡು ತೆಲುಗು ಕೃತಿಗಳು, ಕೆಲವು ತಮಿಳು ಕೃತಿಗಳನ್ನು ಮಾತ್ರವೇ ಪ್ರಕಟಿಸಲಾಗಿತ್ತು. ಈಗ ಶ್ರೀಮತಿ ಚನ್ನಮ್ಮನವರ ಸಂಕಲ್ಪ ಬಲದಿಂದ ಪ್ರಾಯಶಃ ಆಚಾರ್ಯರ ರಚನೆಗಳೆಲ್ಲಾ ಬೆಳಕು ಕಂಡ ಹಾಗಾಗಿದೆ. ಶ್ರೀಮತಿಯವರು ಇಲ್ಲಿನ ತೆಲುಗು-ತಮಿಳು ಕೃತಿಗಳ ಕೆಳಗಡೆ ಕನ್ನಡದಲ್ಲಿ ಸ್ಥೂಲವಾದ ತಾತ್ಪರ್ಯವನ್ನು ಸೇರಿಸಿ ಕನ್ನಡಿಗರಿಗೆ ಇವುಗಳ ಬೆಲೆಯನ್ನು ಹೆಚ್ಚಿಸಿದ್ದಾರೆ.

ಧಾತು ರಚನೆಯನ್ನು ಪರಿಶೀಲಿಸಿದರೆ, ಈ ಉರುಪುಡಿಗಳ ಕಲ್ಪನೆಯೆಲ್ಲಾ ಈಗ ಬಳಕೆಯಲ್ಲಿರುವ ಪ್ರಸಿದ್ಧ ಸ್ವರಜತಿ, ವರ್ಣ ಮುಂತಾದುವುಗಳ ಅಚ್ಚಿನಲ್ಲೇ ರೂಪುಗೊಂಡಿರುವುದನ್ನು ಕಾಣಬಹುದು. ಕೀರ್ತನೆಗಳಲ್ಲಿ ಶ್ರೀ ತ್ಯಾಗರಾಜರ ಮನೋಧರ್ಮದ ಪ್ರಭಾವ ಪ್ರಧಾನವಾಗಿ ವ್ಯಾಪಿಸಿದೆ. ಕೈಗೊಂಡ ರಾಗಗಳೆಲ್ಲಾ ಹೆಚ್ಚಾಗಿ ಪ್ರಸಿದ್ಧವಾದ ರಕ್ತಿರಾಗಗಳೇ ಆಗಿವೆ. ಕೆಲವು ಮೇಳ ಕರ್ತಗಳ ಬಳಕೆಯನ್ನೂ ಕಾಣುತ್ತೇವೆ. ನಿಷಾದವನ್ನು ಪೂರ್ತಿಯಾಗಿ ವರ್ಜಮಾಡಿದ 'ಶುದ್ಧಕಾಂಬೋದಿ', ಋಷಭವನ್ನು ತ್ಯಾಗಮಾಡಿದ 'ದಿವ್ಯಮಾಲತಿ' ಎಂಬ ಹೆಸರಿನ ತೋಡಿ, ಹೀಗೆ ಒಂದೆರಡು ರಾಗಗಳ ಪ್ರಯೋಗವನ್ನು ನೋಡಬಹುದು. ಸುಪ್ರಸಿದ್ಧ ರಕ್ತಿ ಸ್ವರೂಪವುಳ್ಳ ಬೇಗಡೆ ರಾಗದಲ್ಲಿ ನಿಷಾದವನ್ನು ತ್ಯಾಗಮಾಡಿ ವಕ್ರಷಾಡವ ರಾಗವನ್ನಾಗಿ ಬಳಸಿರುವುದು ಅಪೂರ್ವ ಪ್ರಯೋಗ. ಇದು ವಿಮರ್ಶೆಗೆ ಸಾಲದ ಕೆಲಸ, ಪ್ರಯೋಜನವೂ ಇಲ್ಲದ್ದು. ಆಚಾರ್ಯರ ಸಾಹಿತ್ಯ ರಚನೆ ವರ್ಣ ಚಾವಳಿಗಳಿಗಿಂತ ಕೀರ್ತನೆಗಳಲ್ಲಿ ಹೆಚ್ಚು ಸ್ವತಂತ್ರವಾಗಿ, ವರ್ಚಸ್ವಿಯಾಗಿದೆ. ಅದಕ್ಕೆ ಕಾರಣ, ಅದೆಲ್ಲಾ ಅವರ ಆಧ್ಯಾತ್ಮಿಕವಾದ ಆತ್ಮನಿವೇದನೆ – ವೇದನೆಯಾಗಿರುವುದೇ ಎನ್ನಬಹುದು. ಅವರು ಜೀವನದಲ್ಲಿ ಬಹಳ ಕಾವು–ನೋವುಗಳನ್ನು ಅನುಭವಿಸಿದವರೆಂದು ಕೇಳಿದ್ದೇನೆ. ಅವರ ಅಚಂಚಲವಾದ ಭಗದ್ಭಕ್ತಿ ಪ್ರವೃತ್ತಿಯ ಪ್ರಭಾವ ಪ್ರಾಬಲ್ಯಗಳು ಹೆಪ್ಪುಗಟ್ಟಿ ಆ ಕೃತಿಗಳಲ್ಲೆಲ್ಲಾ ಹೊರಸೂಸುತ್ತಿವೆ. ಅಲ್ಲಿ ಇಲ್ಲಿ ಭಾಷೆಯ ಹೊಸಿಗೆ ಎಡವಿ ಕುಂಟುತ್ತಿರುವುದಕ್ಕೆ ಆ ಭಾವಬಲವೇ ಕಾರಣವಾಗಿರಬಹುದು. ಅರ್ಥ ಭಾವಗಳು ಅನುವಾದಗಳೇ ಆದರೂ, ಆ ಅನುಭವದ ಬಲದಿಂದ ಹೊಸದಾಗಿ ತೋರಿ ನಮ್ಮನ್ನೆಳೆಯುತ್ತವೆ. ಈ ಎರಡು ಮಾತನ್ನು ಬರೆಯಲು ಅವಕಾಶ ಕೊಟ್ಟ ಶ್ರೀಮತಿ ಚನ್ನಮ್ಮನವರಿಗೆ ನನ್ನ ಧನ್ಯವಾದ, ಹಾರ್ದಿಕವಾದ ಅಭಿನಂದನೆ ಮತ್ತು ಮಂಗಳಾಶೀರ್ವಾದ. ಕರ್ನಾಟಕ ಸಂಗೀತ ರಸಿಕರು ಈ ಪುಸ್ತಕವನ್ನು ತುಂಬು ಮನಸ್ಸಿನಿಂದ ಸ್ವಾಗತಿಸುವರು.

ಬೆಂಗಳೂರು
20-12-73

ರಾಳ್ಳಪಲ್ಲಿ ಅನಂತಕೃಷ್ಣ ಶರ್ಮಾ.

Karnataka Gana Vidya Pradeepike is a rare musical Compilation, containing jatiswaras, Varnas, Telugu Keertanas, Tamil Keetanas, Javalis, Tillanas and Kannada devaranamas composed by the great, versatile vaggeyakara Veena Krishnamacharyar of revered memory, who was a champion of the 18th Century tradition. The Compositions, some of them in rare ragas, throw a flood of the lustre on the contour of the kritis and phraseology of the ragas, in which the carving of the sangitis project a rare originality. The theme of the libretto proclaims his agile sense of humour, evaluation of life, deep philosophy, self abnegation, ultimately his prapatti vada at the Lotus feet of his Aradhya Deva Padmapuri Varada.

Deep sense of duty and dedication have prompted Gana Kokile G. Channamma, who is a living authority and the most beloved pupil of Sri Acharyar, to vouchsafe the rare and hidden treasure to the music loving public in the form of a grantha, the publication of which has costed immensely in effort & cash.

Particularly, Acharyar's Tamil Kirtis and Telugu Javalis are pioneer publications in Kannada print, and they should be welcomed and cosumed by connoisseurs with avidity.

Sangeeta Vidya Saagara,
R. R. KESHAVA MURTHY
30th December 1973

ಸಂಗೀತ ವಿದ್ವಾ‌ನ್ ವಿ. ಕೃಷ್ಣಮಾಚಾರ್ಯರನ್ನು ನಾನು ಬಲ್ಲೆ. ಇವರು ನನಗಿಂತ ಹಿರಿಯರು. ಕೆ. ವಿ. ಶ್ರೀನಿವಾಸಯ್ಯಂಗಾರ್ಯರು ಮತ್ತು ಕೆ. ವರದಾಚಾರ್ಯರು (ಇವರಿಬ್ಬರೂ ಸಂಗೀತ ವಿದ್ವಾಂಸರೇ) ಅವರ ಸಹೋದರರು ಟೈಗರ್ ವರದಾಚಾರ್ಯರ ಹೆಸರನ್ನು ಕೇಳದವರಿಲ್ಲ. ಅವರ ತಮ್ಮಂದಿರೇ ಇವರು. ಕೃಷ್ಣಮಾಚಾರ್ಯರು ದೊಡ್ಡ ವಿದ್ವಾಂಸರು. ವೀಣೆಯನ್ನೂ ಚೆನ್ನಾಗಿ ನುಡಿಸುತ್ತಿದ್ದರು. ಸಾಹಿತ್ಯದಲ್ಲೂ ನಿಪುಣರಾಗಿದ್ದರು. ಬಹುಕಾಲ ಮದ್ರಾಸಿನಲ್ಲಿದ್ದೂ, ಆಮೇಲೆ ಬೆಂಗಳೂರಿಗೆ ಬಂದು ನೆಲೆಸಿದರು. ತೆಲುಗು, ತಮಿಳಿನಲ್ಲಿ ಅನೇಕ ಕೀರ್ತನೆಗಳನ್ನೂ, ಜಾವಳಿ, ಪದವರ್ಣ, ತಿಲ್ಲಾನ ಮುಂತಾದುವನ್ನೂ ರಚಿಸಿದ್ದಾರೆ. ಇವರ ಶಿಷ್ಯರಲ್ಲಿ ಜಿ. ಚೆನ್ನಮ್ಮ ಒಬ್ಬರು. ಇವರು ಕೃಷ್ಣಮಾಚಾರ್ಯರಲ್ಲಿ ಪ್ರೌಢಪಾಠಮಾಡಿ ಅನೇಕ ಕಡೆ ಹಾಡಿ, ಹೆಸರು ಸಂಪಾದಿಸಿದ ಮೇಲೆ, ಬೆಂಗಳೂರು ಮಹಾರಾಣಿ ಕಾಲೇಜಿನಲ್ಲಿ ಕೆಲಸಮಾಡಿ ನಿವೃತ್ತರಾಗಿದ್ದಾರೆ. ಲೆಕ್ಚರರಾಗಿದ್ದಾಗ, ಸಂಗೀತ ಭಾಗದ ಸಮಿತಿಗಳಲ್ಲಿ ಸದಸ್ಯರಾಗಿಯೂ ಪರೀಕ್ಷಕರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಶ್ರೀ ಕೃಷ್ಣಮಾಚಾರ್ಯರಿಗೆ ಅನೇಕ ಶಿಷ್ಯರಿದ್ದಾರೆ. ಆದರೆ ಚನ್ನಮ್ಮನವರು ಗುರು ಕಾಣಿಕೆಯಾಗಿ, ಅವರ ರಚನೆಗಳನ್ನು ಅಚ್ಚುಹಾಕಿಸಿ (ಸ್ವಂತ ಖರ್ಚಿನಿಂದ) ಹೊರತರಲಿರುವ ಯೋಚನೆ ಮಾಡಿರುವುದು ಶ್ಲಾಘನೀಯವಾದ ಸಂಗತಿ. ಇದರಿಂದ ಇವರ ಗುರುಭಕ್ತಿ ಎಷ್ಟೆಂಬುದು ವ್ಯಕ್ತವಾಗುತ್ತೆ. ಈ ರೀತಿಯಾಗಿ ಇವರು ಗುರುಕಾಣಿಕೆಯನ್ನು ಸಮರ್ಪಿಸುವುದು ಎಲ್ಲರೂ ಅನುಸರಿಸಬೇಕಾದ ಸಂಗತಿಯಾಗಿದೆ. ಅಂತೂ, ಈ ರೀತಿಯಾಗಿ ಸೇವೆ ಸಲ್ಲಿಸಿ ತಮ್ಮ ಜನ್ಮ ಸಾರ್ಥಕಮಾಡಿಕೊಂಡಿದ್ದಾರೆ. ಇದ್ದರೆ ಇಂತಹ ಶಿಷ್ಯರಿರಬೇಕು. ಇದು ಎಲ್ಲರಿಗೂ ಬರುವುದಿಲ್ಲ. ಶ್ರೀ ಮಾರುತಿಯು ಇವರಿಗೆ ಸಕಲ ಸನ್ಮಂಗಳವನ್ನು ಉಂಟುಮಾಡಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು 18-12-1973 ಗಾನವಿಶಾರದ **ಡಾ|| ಬಿ. ದೇವೇಂದ್ರಪ್ಪ.**

"ಕರ್ನಾಟಕ ಗಾನ ವಿದ್ಯಾಪ್ರದೀಪಿಕೆ" ಎಂಬ ಶೀರ್ಷಿಕೆಯಲ್ಲಿ ಸಂಗೀತ-ಸಾಹಿತ್ಯ-ವೀಣಾ-ವಿದ್ವಾನ್ ಶ್ರೀ ಕೃಷ್ಣಮಾಚಾರ್ಯರ ಕೃತಿಗಳ ಪುಸ್ತಕ ಪ್ರಕಟವಾಗುತ್ತಿರುವುದು ಬಹಳ ಪ್ರಶಂಸನೀಯ. ಆಚಾರ್ಯರ ನೂರಾರು ಕೃತಿರತ್ನಗಳು ಕರ್ನಾಟಕದ ಸಂಗೀತಕ್ಕೆ ಅವರು ನೀಡಿರುವ ಅಮೂಲ್ಯವಾದ ಕೊಡುಗೆ. ಕರ್ನಾಟಕ ಸಂಗೀತದಲ್ಲಿರುವ ಅಷ್ಟು ಸಂಗೀತ ಪ್ರಕಾರಗಳಲ್ಲಿಯೂ, ಜತಿಸ್ವರ, ವರ್ಣ, ಪದವರ್ಣ, ಕೃತಿ, ಜಾವಳಿ, ತಿಲ್ಲಾನ, ಇತ್ಯಾದಿ ಕೃತಿಗಳನ್ನು ರಚಿಸಿರುವುದು ಅವರ ಕಲ್ಪನಾ-ಸಾಮರ್ಥ್ಯದ ಕುರುಹಾಗಿದೆ. ಹಲವು ಭಾಷೆಗಳಲ್ಲಿ ರಚಿಸಿದ್ದಾರೆ. 'ಹರಿಕೇದಾರ', 'ಶುದ್ಧ ಕಾಂಭೋದಿ' ಮತ್ತು ಕೆಲವು ಹಿಂದೂಸ್ಥಾನಿ ರಾಗಗಳನ್ನು ಬಳಸಿರುವುದು ಅವರ ವಿವಿಧ ಅಭಿರುಚಿಗೆ ಸಾಕ್ಷಿ. ಒಂದೊಂದೂ ಭಾವ-ರಸಭರಿತವಾಗಿದೆ. ಗುಪ್ತವಾಗಿದ್ದ ಈ ಕೃತಿರತ್ನಗಳು ಈಗ ಬೆಳಕಿಗೆ ಬರುತ್ತಿರುವುದು ಒಂದು ಸುಯೋಗ. ಇದಕ್ಕೆ ಕಾರಣರು ಆಚಾರ್ಯರ ಪ್ರಮುಖ ಶಿಷ್ಯೆಯಾದ ಸಂಗೀತ-ವಿದುಷಿ ಶ್ರೀಮತಿ ಜಿ. ಚನ್ನಮ್ಮನವರು. ಇವುಗಳನ್ನು ಸ್ವರ ಚಿಟ್ಟೆ ಸಹಿತ ತಾವೇ ಅಚ್ಚು ಹಾಕಿಸಿ ಪ್ರಕಟಿಸುತ್ತಿರುವುದು ಚನ್ನಮ್ಮನವರ ಸುಯೋಗವೆಂದು ಭಾವಿಸುತ್ತೇನೆ. ಅವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು.

ಶ್ರೀ ಕೃಷ್ಣಮಾಚಾರ್ಯರ ಕೃತಿಗಳ ಈ ಪುಸ್ತಕ ಸಂಗೀತ ವಿದ್ವಾಂಸರು ಹಾಗೂ ರಸಿಕರಿಂದ ಹೇರಳವಾದ ಮನ್ನಣೆಯನ್ನು ಪಡೆಯಲೆಂದು ಹಾರೈಸುತ್ತೇನೆ.

ಬೆಂಗಳೂರು, 20-12-1973 ಶ್ರೀ ವಿ. ದೊರೆಸ್ವಾಮ್ಯಯ್ಯಂಗಾರ್,
ಸಂಗೀತ ನಿರ್ದೇಶಕರು, ಆಕಾಶವಾಣಿ

ಪೂಜ್ಯ ಶ್ರೀ ವೀಣಾವಿದ್ವಾನ್ ಕೃಷ್ಣಮಾಚಾರ್ಯರು ಪ್ರಸಿದ್ಧ ವಾಗ್ಗೇಯಕಾರರಾದ ಪಟ್ಣಂ ಸುಬ್ರಹ್ಮಣ್ಯಯ್ಯರ್ ಅವರ ಶ್ರೇಷ್ಠ ಶಿಷ್ಯತ್ರಯರಲೊಬ್ಬರು; ಇನ್ನಿಬ್ಬರು ಇವರ ಸಹೋದರರಾದ ದಿವಂಗತ ಕೆ. ವಿ. ಶ್ರೀನಿವಾಸಯ್ಯಂಗಾರ್ಯರು ಮತ್ತು ದಿವಂಗತ ಟೈಗರ್ ವರದಾಚಾರ್ಯರು, ಈ ಮೂವರೂ ಸಂಗೀತಲೋಕಕ್ಕೆ ಧ್ರುವತಾರೆಗಳಾಗಿದ್ದು, ಪ್ರಾತಃ ಸ್ಮರಣೀಯರಾಗಿದ್ದಾರೆ. ಶ್ರೀ ಕೃಷ್ಣಮಾಚಾರ್ಯರು ಸಂಗೀತ ಸಾಹಿತ್ಯಗಳೆರಡರಲ್ಲೂ ತುಂಬುಪಾಂಡಿತ್ಯವನ್ನು ಹೊಂದಿ, ಉದ್ದಾಮ ವಾಗ್ಗೇಯಕಾರರೂ ಆಗಿದ್ದರು. ಊರ್ಧ್ವ ಮುಖವಾಗಿ ವೀಣೆ ನಿಲ್ಲಿಸಿಕೊಂಡು ನುಡಿಸಿ, ತಮ್ಮ ಸಂಚು ಶಾರೀರದಿಂದ ವಾದ್ಯದ ನಾದಕ್ಕೆ ದನಿಗೂಡಿಸಿ, ಕೃಷ್ಣಮಾಚಾರ್ಯರು ಹಾಡುತ್ತಿದ್ದುದನ್ನು ಕೇಳಿದ ಪುಣ್ಯಶಾಲಿಗಳಿಗೆ ತಾವು ಗಂಧರ್ವಲೋಕಕ್ಕೆ ಒಯ್ಯಲ್ಪಟ್ಟ ಅನುಭವವೇ ಆಗುತ್ತಿತ್ತು. ಆ ಸುಖಾನುಭವಿಗಳಲ್ಲಿ ನಾನೂ ಒಬ್ಬನಾಗಿದ್ದೇನೆ.

ದಿ|| ಕೃಷ್ಣಮಾಚಾರ್ಯರ ಶಿಷ್ಯವೃಂದ ದೊಡ್ಡದು. ಆಚಾರ್ಯರ ರಚನೆಗಳು ಅವರ ಶಿಷ್ಯರಲ್ಲಿ ಹಂಚಿ ಹೋಗಿದ್ದರೂ, ಎಲ್ಲ ರಚನೆಗಳನ್ನು ಸಂಪಾದಿಸಿ, ಕ್ರೋಢೀಕರಿಸಿ, ಮುದ್ರಿಸಿ ಪುಸ್ತಕರೂಪದಲ್ಲಿ ಬೆಳಕಿಗೆ ತರುವ ಹಿರಿಯ ಭಾಗ್ಯ ಆಚಾರ್ಯರ ಪ್ರಮುಖ ಶಿಷ್ಯೆ ಗಾನ ಕೋಗಿಲೆ ಶ್ರೀಮತಿ ಚನ್ನಮ್ಮನವರಿಗೆ ಲಭಿಸಿದೆ. ಶ್ರೀಮತಿಯವರು ನಿಜಕ್ಕೂ ಪುಣ್ಯಶಾಲಿಗಳು. ಆಚಾರ್ಯರ ಕೃತಿಹೊತ್ತಿಗೆಯ ಅಭಿದಾನ "ಕರ್ಣಾಟಕ ಗಾನ ವಿದ್ಯಾ ಪ್ರದೀಪಿಕೆ".

ಆಚಾರ್ಯರು ತೆಲುಗು, ತಮಿಳು ಮತ್ತು ಕನ್ನಡ ಭಾಷೆಗಳಲ್ಲಿ ಕೃತಿ ರಚನೆ ಮಾಡಿದ್ದಾರೆ. ಇವರ ಕೃತಿ ಮುದ್ರೆ "ಪದ್ಮಪುರಿ ವರದ" ತಮಿಳು ರಚನೆಗಳಲ್ಲಿ "ಪಾಂಡುರಂಗ" ಮತ್ತು "ತಿರುವೇಂಗಡ" ಎಂಬ ಅಂಕಿತಗಳು ಕಂಡುಬರುತ್ತವೆ. ಕನ್ನಡದಲ್ಲಿ ಆಚಾರ್ಯರ ಕೃತಿ ಒಂದೇ ಕಂಡುಬಂದಿದೆ. ಹಿಂದುಸ್ಥಾನಿ ಅಸಾವೇರಿ ರಾಗದಲ್ಲಿ, "ಆರಿದ್ದರೇನು" ಎಂಬುದು ಆ ಕೃತಿ.

ಸಂಗೀತಲೋಕಕ್ಕೆ ತಮ್ಮ ಗುರುವರ್ಯರ ಅಮೋಘ ರಚನೆಗಳನ್ನು ಪುಸ್ತಕ ರೂಪದಲ್ಲಿ ಒದಗಿಸಿ, ಕರ್ಣಾಟಕ ಸಂಗೀತಕ್ಕೆ ಹಿರಿದಾದ ಕಾಣಿಕೆಯನ್ನಿತ್ತು, ಗುರುವಿಗೆ ತಕ್ಕ ಶಿಷ್ಯೆ ಯೆನಿಸಿ ಧನ್ಯರಾಗಿದ್ದಾರೆ ಶ್ರೀಮತಿ ಚನ್ನಮ್ಮನವರು.

21-12-73, ಬೆಂಗಳೂರು. ಶ್ರೀ ಎಲ್. ರಾಜಾರಾವ್,
ನಿವೃತ್ತ ಪ್ರಾಧ್ಯಾಪಕರು, ಆಚಾರ್ಯ ಪಾಠಶಾಲಾ ಕಾಲೇಜು.

ಸಂಗೀತ ವಿದುಷಿ ಶ್ರೀಮತಿ ಜಿ. ಚನ್ನಮ್ಮನವರು ತಮ್ಮ ಗುರುಗಳಾದ ದಿ|| ವೀಣಾ ವಿದ್ವಾನ್ ವಿ. ಕೃಷ್ಣಮಾಚಾರ್ಯರ ಸಂಗೀತ ರಚನೆಗಳನ್ನು "ಕರ್ನಾಟಕ ಗಾನ ವಿದ್ಯಾ ಪ್ರದೀಪಿಕೆ" ಎಂಬ ಹೊತ್ತಿಗೆಯ ಮೂಲಕ ಸಂಗೀತ ಪ್ರಪಂಚಕ್ಕೆ ಬಿಡುಗಡೆ ಮಾಡುತ್ತಿರು ವುದು ನನಗೆ ಬಹಳ ಸಂತೋಷವನ್ನು ಉಂಟುಮಾಡಿದೆ

ಶ್ರೀಯುತ ಕೃಷ್ಣಮಾಚಾರ್ಯರವರು ಪ್ರಸಿದ್ಧ ಸಂಗೀತ ಮನೆತನಕ್ಕೆ ಸೇರಿದವರು. ಅಲ್ಲದೆ, ಇವರು ಕೆ. ವಿ. ಶ್ರೀನಿವಾಸಯ್ಯಂಗಾರ್ ಮತ್ತು ಟೈಗರ್ ವರದಾಚಾರ್ಯರ ಸಹೋದರರೆಂದಮೇಲೆ ಅವರ ಪ್ರತಿಭೆ ಏನೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇವರ ಪಾಂಡಿತ್ಯಪೂರ್ಣವಾದ ರಚನೆಗಳು ಕರ್ನಾಟಕ ಸಂಗೀತ ಕ್ಷೇತ್ರದಲ್ಲಿ ಬಹಳ ಜನಪ್ರಿಯವಾಗಿ ಉಳಿಯುತ್ತದೆ.

ಈ ಸ್ತುತ್ಯಪ್ರಯತ್ನಕ್ಕಾಗಿ ನಾನು ಸಂಗೀತ-ವಿದುಷಿ ಶ್ರೀಮತಿ ಜಿ. ಚನ್ನಮ್ಮನವರನ್ನು ಅಭಿನಂದಿಸಿ, ಅವರಿಂದ ಇನ್ನೂ ಇಂತಹ ಸೇವಾಕಾರ್ಯಗಳು ನಡೆಯಲೆಂದು ಹಾರೈಸುತ್ತೇನೆ.

ಪ್ರೊ|| ವಿ. ರಾಮರತ್ನಂ
ಮೈಸೂರು ವಿಶ್ವವಿದ್ಯಾನಿಲಯ
ಪ್ರಿನ್ಸಿಪಾಲ್, ವಿಶ್ವವಿದ್ಯಾನಿಲಯದ ಲಲಿತಕಲಾ ಮಹಾ ವಿದ್ಯಾಲಯ
ಮಾನಸ ಗಂಗೋತ್ರಿ, ಮೈಸೂರು, 19-12-73

ಕಳೆದ ಶತಮಾನದ ಅಂತ್ಯಪಾದ ಹಾಗೂ ಈ ಶತಮಾನದ ಪ್ರಥಮ ಪಾದಗಳಲ್ಲಿ ಮೂವರು ಮಹಾ ಪ್ರತಿಭಾಸಂಪನ್ನರಾದ ಸಹೋದರರು ತಮ್ಮ ಬಹುಮುಖ ಸೇವೆಯಿಂದ ಕರ್ನಾಟಕ ಸಂಗೀತ ರಸಿಕರ ಚಿರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. 'ಟೈಗರ್' ವರದಾಚಾರ್ಯರು ಅಪೂರ್ವವಾದ ಲಕ್ಷ್ಯವಿಭೂತಿ ಸಂಪದ್ಭರಿತರು ; ಶ್ರೀನಿವಾಸಯ್ಯಂಗಾರ್ಯರು ಲಕ್ಷ್ಯಸಾಮಗ್ರಿಯನ್ನು ಪರಿಷ್ಕರಿಸಿ ಪ್ರಕಟಿಸುವುದರಲ್ಲಿ ಹಾಗೂ ಆಧುನಿಕ ಕರ್ನಾಟಕ ಸಂಗೀತ ಶಾಸ್ತ್ರ ನೆಲಗಟ್ಟನ್ನು ನಿರ್ಮಿಸುವುದರಲ್ಲಿ ಅಗ್ರ ಶ್ರೇಣಿಗೆ ಸೇರಿದ ಅಭಿವಂದ್ಯರು. ಕೃಷ್ಣಮಾಚಾರ್ಯರ ಲಕ್ಷ್ಯನಿರ್ಮಿತಿಯಲ್ಲಿಯೂ, ಶಿಕ್ಷಣ ಕ್ಷೇತ್ರದಲ್ಲಿಯೂ ಪ್ರಾತಃಸ್ಮರಣೀಯರು. ಪುಣ್ಯದಿಂದ, ಶ್ರೀ ಕೃಷ್ಣಮಾಚಾರ್ಯರು ಕನ್ನಡನಾಡನ್ನು ಕೆಲಕಾಲ ಸೇವಾ ಕ್ಷೇತ್ರವನ್ನಾಗಿ ಆರಿಸಿಕೊಂಡರು. ಇಲ್ಲಿಯೇ ಅವರ ಶಿಷ್ಯಮಹತಿ, ಲಕ್ಷ್ಯನಿರ್ಮಿತಿ ಬೆಳೆದುದು. ಅವರು ತೆಲುಗು, ತಮಿಳು, ಕನ್ನಡಗಳಲ್ಲಿ ಸಮಾನ ಪರಿಣತಿಯನ್ನು ಪಡೆದಿದ್ದರು. ಅವರ ಕೃತಿಗಳನ್ನು ನಾನು ಕೇಳಿ, ಅವುಗಳಲ್ಲಿನ ಧಾತು ಮಾತುಗಳಲ್ಲಿನ ಭಾವಶುದ್ಧಿಯನ್ನೂ, ಭಾರತೀಯ ಸಂಗೀತದ ಅತ್ಯುನ್ನತ ಆದರ್ಶಗಳಿಗೆ ಅನನ್ಯ ಸ್ವಯಮರ್ಪಣವನ್ನೂ ಮನಗಂಡು ಮೆಚ್ಚಿದ್ದೇನೆ. ಪರಂಪರಾನುಗತ ಲಕ್ಷ್ಯ ಸಂಪದಕ್ಕೆ, ಆಧುನಿಕ ಸೃಷ್ಟಿಸಿರಿಯನ್ನೂ ಸೇರಿಸಿ, ಸಂಗೀತ ಸರಸ್ವತಿಯ ಮಡಿಲನ್ನು ತುಂಬುವ ಸ್ತುತ್ಯ ಪ್ರವೃತ್ತಿ ಇಂದು ಕಂಡು ಬರುತ್ತಿದೆ. ಶ್ರೀ ಕೃಷ್ಣಮಾಚಾರ್ಯರ ಅಮೂಲ್ಯ ಕೃತಿಗಳಲ್ಲಿ, ಅವರ ಬಹುಮುಖ ಪ್ರತಿಭೆಯನ್ನು ಪ್ರತಿನಿಧಿಸುವಂತಹ ಸುಮಾರು 180 ವಿವಿಧ ರಚನಾ ಪ್ರಕಾರಗಳನ್ನು ಈ ಪುಸ್ತಕದಲ್ಲಿ ಮಾತುವಿನ ಸಾರಾಂಶದೊಡನೆ ಪ್ರಕಟಿಸಲಾಗಿದೆ. ಇದರ ಸಂಗ್ರಹದಲ್ಲಿಯೂ, ಪರಿಷ್ಕರಣದಲ್ಲಿಯೂ, ಗುರುಭಕ್ತಿಯಲ್ಲಿಯೂ, ಸಂಗೀತ ಸೇವಾ ತತ್ಪರತೆಯಲ್ಲಿಯೂ ಇಂತಹ ಕಠಿಣವೂ, ಕ್ಲಿಷ್ಟವೂ ಆದ ಕಾರ್ಯವು ಅಪೇಕ್ಷಿಸುವ ಶ್ರದ್ಧೆ, ಶ್ರಮಗಳಲ್ಲಿಯೂ ಶ್ರೀ ಕೃಷ್ಣಮಾಚಾರ್ಯರ ಪ್ರಮುಖ ಶಿಷ್ಯರೂ, ಸ್ವತಃ ಪ್ರಖ್ಯಾತ ಗಾಯಕಿಯೂ, ಶಿಕ್ಷಕರೂ ಆಗಿರುವ ಗಾನ ಕೋಗಿಲೆ, ಶ್ರೀಮತಿ ಚನ್ನಮ್ಮನವರು ಅನುಸರಣೀಯರಾಗಿದ್ದಾರೆ, ಅಭಿನಂದನೀಯರಾಗಿದ್ದಾರೆ, ಅಭಿವಂದ್ಯರಾಗಿದ್ದಾರೆ. ಕರ್ನಾಟಕ ಸಂಗೀತ ರಸಿಕರು ಈ ಕೃತಿ ಸಂಗ್ರಹವನ್ನು ಆದರದಿಂದ ಬರಮಾಡಿಕೊಳ್ಳುವರೆಂದು ಆಶಿಸುತ್ತೇನೆ.

ಸಂಗೀತ ಶಾಸ್ತ್ರ ಸರಸ್ವತಿ ಪ್ರೊ. ಸತ್ಯನಾರಾಯಣ, ಎಂ.ಎಸ್.ಸಿ.
ಎಫ್.ಆರ್.ಐ.ಎಸ್. (ಲಂಡನ್) ಎಂ.ಎಸ್.ಎ. (ಪ್ಯಾರಿಸ್) ಎಫ್.ಎ.ಎಸ್.ಐ.

# ಪ ರಿ ವಿ ಡಿ

## ತಿಲ್ಲಾನಗಳು





### ತಪ್ಪು - ಒಪ್ಪು ಸೂಚಿ

ಈ ಗ್ರಂಥವನ್ನು ಅಚ್ಚು ಹಾಕುವ ಕಾರ್ಯವು ಬಹಳ ತ್ವರಿತವಾಗಿ ಸಾಗಿದ್ದರಿಂದ ಹಲವು ಮುದ್ರಣ ದೋಷಗಳು ಉಳಿದುಕೊಂಡವು. ಅವುಗಳನ್ನು ಪುಸ್ತಕದ ಕೊನೆಗೆ ಕೊಟ್ಟಿರುವ ತಪ್ಪು-ಒಪ್ಪು ಸೂಚಿಯಲ್ಲಿ ತೋರಿಸಲಾಗಿದೆ. ದಯೆಯಿಟ್ಟು ಅವುಗಳನ್ನು ಸರಿಪಡಿಸಿಕೊಂಡು ಓದಿ, ಪಾಠಮಾಡಬೇಕಾಗಿ ಸಹೃದಯರಲ್ಲಿ ಪ್ರಾರ್ಥನೆ.

—ಸಂ.

# ಜತಿಸ್ವರಗಳು

ರಾಗ–ಕಲ್ಯಾಣಿ (65ನೇ ಮೇಳ ಕರ್ತದಲ್ಲಿ ಉಪಾಂಗ ಜನ್ಯ)
ಆರೋಹಣ–ಸ ರಿ$_2$ ಗ$_3$ ಮ$_2$ ಪ ದ$_2$ ನಿ$_3$ ಸ̇

ತಾಳ–ತಿಶ್ರಜಾತಿ ತ್ರಿಪುಟತಾಳ.
ಅವರೋಹಣ–ಸ̇ ನಿ$_3$ ದ$_2$ ಪ ಮ$_2$ ಗ$_3$ ರಿ$_2$ ಸ

1. ‖ ಸೇ̇ ॰ ರಿ̇ ನಿ ದ ಪ | ಮ ಪಾ – ಗ ರಿ ಗ ಮ | ಪಾ ॰ ಪ ಮ ಗ ರಿ | ಗಾ – ಮ ಪಾ ದ ನಿ ‖
2. ‖ ಸೇ̇ ॰ ನಿ ದ ನಿ ರಿ̇ | ಸೇ̇ ನಿ–ದ ಮ ಗ ರಿ | ಸಾ ನ̣ಿ ಧ̣ ನ̣ಿ ರಿ ಗ | ಸ ರಿ ಗ–ಮ ಪ–ದ ನಿ ‖
3. ‖ ಸಾ ಸ–ನಿ ದ ಪ ಮ | ಸ̇ ನಿ ದ–ಪ ಮ ಗ ರಿ | ಸಾ ಸ–ನ̣ಿ ಧ̣ ಗ ರಿ | ಗಾ ಮ–ದ ಪ ದ ನಿ ‖
4. ‖ ಸ̇ ಸೇ̇ ನಿ ದ ಪ ಮ | ಪ ಪಾ ಮ ಗ ರಿ ನ̣ಿ | ಸ ಸಾ ನ̣ಿ ರಿ ಗ ಮ | ಪ ಪಾ – ಮ ಪ ದ ನಿ ‖
5. ‖ ಸ̇ ನಿ ಸ̇–ನಿ ದ ಪ ದ | ಪ ಮ ಪ–ಮ ಗ ರಿ ಸ | ಸ ನ̣ಿ ಸ–ರಿ ಸ ಗ ರಿ | ಮ ಗ–ದ ನಿ–ದ ದ ನಿ ‖
6. ‖ ಸ ಸ ಸ–ನಿ ದ ಪ ದ | ಪ ಪ ಪ–ಮ ಗ ರಿ ಗ | ಸ ಸ ಸ ಸ ರಿ ಗ ಮ | ಪ ಪ ಪ–ಮ ಪ ದ ನಿ ‖
7. ‖ ನೀ ದ–ಮ ಗ ಮ ಪ | ಗಾ ರಿ–ಸ ನ̣ಿ ರಿ ಸ | ನೀ ದ–ಗ ರಿ ಗ ಮ | ನ̣ಿ ರಿ ಗ–ಮ ಪ ದ ನಿ ‖
8. ‖ ದಾ ಪ–ಮ ಪ ಗ ಮ | ದಾ ಮ–ಗ ರಿ ಸ ನ̣ಿ | ಧ̣ೇ ನ̣ಿ ರಿ ಸ ಗ ರಿ | ದಾ ಪ–ಮ ಗ ಪ ಮ ‖
9. ‖ ಪಾ ॰–ಪಾ ಪ ಮ | ಗಾ ॰–ಗಾ ಗ ರಿ | ರೀ ॰ ರೀ–ಸ ನ̣ಿ | ಧ̣ ನ̣ೀ–ರೀ ಗ ಮ ‖

‖ ಪಾ ಮ–ಗ ರಿ ಗ ಮ | ಪಾ ದ.ಪ ಮ ಗ ಮ | ಪಾ ನಿ–ದ ಮ ಗ ಮ | ಪಾ ಸ–ನಿ ದ ಪ ಮ ‖
‖ ಪ ಪ ಮ.ಗ ಮ ಪ ದ | ಪ ಪ ದ–ಮ ಪ ದ ನಿ | ಪ ಪ ನಿ–ಪ ದ ನಿ ಸ̇ | ಪ ಪ ಸ̇–ದ ನಿ ಸ̇ ರಿ̇ ‖
‖ ಪ ದ ನಿ–ರಿ̇ ಸ̇ ಗ ರಿ̇ | ಪ̇ ಮ̇ ಗ–ರಿ̇ ಸ̇ ನಿ ದ | ಪ ದ ನಿ–ರಿ̇ ನಿ ದ ಮ | ಪ ಮ ಗ–ಮ ಪ ದ ನಿ ‖



**ರಾಗ – ಕಲ್ಯಾಣಿ (65ನೇ ಮೇಳಕರ್ತದಲ್ಲಿ ಉಪಾಂಗ ಜನ್ಯ)** **ತಾಳ–ಆದಿ** 

**ಆರೋಹಣ**–ಸ ರಿ$_2$ ಗ$_3$ ಮ$_2$ ಪ ದ$_2$ ನಿ$_3$ ಸ̇.

**ಅವರೋಹಣ**–ಸ̇ ನಿ$_3$ ದ$_2$ ಪ ಮ$_2$ ಗ$_3$ ರಿ$_2$ ಸ

1. ‖ ಸ̇ ೯ ೯ ೯ | ೯ ೯ ರಿ̇ ನಿ | ದ ಪಾ ದ | ಮ ಪ ಗ ಮ | ಪಾ ೯ ೯ | ೯ ೯ ಪ ಮ | ಗ ರಿ ೯ ಗ | ಮ ಪ ದ ನಿ ‖
‖ ಸ̇ ೯ ಸ̇ ೯ | ಸ̇ ೯ ನಿ – ದ | ನಿ ೯ ನಿ ೯ | ನಿ ೯ ದ – ಮ | ಪಾ ಪಾ | ಪಾ ಗ – ರಿ | ಗಾ ಗಾ | ಮ ಪ ದ ನಿ ‖

2. ‖ ನಿ ೯ ದ | ಮ–ಗ ದ ಮ | ಗಾ ೯ ರಿ | ಸ̣ ನಿ̣ ರಿ ಸ̣ | ರಿ ೯ ೯ ನಿ̣ | ಗ ರಿ ಮ ಗ | ದಾ ೯ ಮ | ನಿ ದ–ಸ̇ ನಿ ‖
‖ ನಿ ನಿ ದ – ನಿ | ಸ̇ ರಿ̇ ನಿ ರಿ̇ | ನಿ ಗ ರಿ̇ – ನಿ | ರಿ̇ ನಿ ದ ಮ | ನಿ ದ ಮ ನಿ | ದ ಮ ಗ ರಿ | ನಿ̣ ರಿ ಗ–ದ | ಮ ಪ ದ ನಿ ‖

3. ‖ ದಾ ಪ ಮ | ಪಾ–ಪ ರಿ | ಗಾ ರಿ ಸ | ರಿ ೯ ನಿ̣ ಸ̣ | ರಿ ೯ ೯ ರಿ | ೯ ಗ ರಿ ಗ | ಮ ಪಾ–ರಿ | ೯ ಗ ಮ ಪ ‖
‖ ದಾ ಪ ಮ | ದ ಪ ಮ ಪ | ದಾ ನಿ ದ | ದ ಮ ಪ ದ | ದಾ ನಿ ಸ̇ | ಸ̇–ನಿ ದ ನಿ | ದಾ ನಿ ಸ̇ | ರಿ̇–ನಿ ಸ̇ ೯ ‖
‖ ದಾ ನಿ ದ | ರಿ̇ ಸ̇ ನಿ ದ | ದಾ ನಿ ದ | ನಿ ರಿ̇ ನಿ ರಿ̇ | ದಾ ನಿ ದ | ಗ̇ ರಿ̇ ಸ̇ ನಿ | ದಾ ನಿ ರಿ̇ | ಗ̇ ರಿ̇ ಗ̇ ೯ ‖
‖ ದಾ ನಿ ರಿ̇ | ಗ̇ ರಿ̇ ಮ̇ ಗ̇ | ರಿ̇ ದಾ ರಿ̇ | ರಿ̇ ನಿ ದ ಮ | ದ – ದ ಗ̇ ರಿ̇ | ಸ̇ ನಿ – ದ ರಿ̇ | ನಿ ದ ಮ – ದ | ಮ ಪ ದ ನಿ ‖

4. ‖ ಪಾ ಪಾ | ಪಾ ದ ಪ | ಮ ಪಾ ಪ | ಮ ಗ–ಗ ರಿ | ಗಾ ಗಾ | ಗಾ ಮ ಪ | ಪ ಗಾ ಗ | ರಿ ಸ̣ ಸ̣ ನಿ̣ ‖
‖ ರಿ ೯ ರಿ ೯ | ರಿ ೯–ಗ ರಿ | ನಿ̣ ರಿ ೯ ರಿ | ಸ̣ ನಿ̣–ಧ̣ ನಿ̣ | ಸ̣ ೯ ಸ̣ ೯ | ಸ̣ ೯–ರಿ ಸ̣ | ಗ ರಿ ಮ ಗ | ನಿ ದ ಪ ಮ ‖
‖ ಪಾ ಪಾ | ಪ ಮ ಗ ಮ | ಪಾ ಪಾ | ದ ಮ ಗ ಮ | ಪಾ ಪಾ | ನಿ ದ – ಗ ಮ | ಪಾ ಪಾ | ಸ̇ ನಿ ದ ಮ ‖
‖ ಪಾ ದ – ಮ | ಪ ದ – ಗ ಮ | ಪಾ ದ – ನಿ | ದ ಮ ಗ ಮ | ಪಾ ದ – ಸ̇ | ನಿ ದ ಪ ಮ | ಪಾ – ದ ರಿ̇ | ನಿ ದ ಪ ಮ ‖
‖ ಪಾ ದ – ಗ̇ | ರಿ̇ ನಿ ದ ಮ | ಪಾ ರಿ̇ ನಿ | ದ ಮ ಗ ಮ | ಪಾ – ಸ̇ ನಿ | ದ ಮ ಗ ಮ | ಪಾ ಪ ಮ | ಗ ರಿ ಗ ಮ ‖
‖ ಪ ಮ ಪ ಗ | ಮ ಪ–ಪ ಮ | ದ ದ ನಿ ದ | ಪ ದ ದ ನಿ | ಪ ದ ಪ–ದ | ನಿ ದ–ಪ ನಿ | ದ–ದ ಸ̇ ನಿ | ಪ ದ ನಿ ರಿ̇ ‖
‖ ಪ ದ ನಿ – ದ | ನಿ ಸ̇ – ಪ ದ | ದ ನಿ ನಿ ಸ̇ | ಸ ರಿ̇ ರಿ̇ ಗ̇ | ಪ ದ ನಿ ಗ̇ | ರಿ̇ ಗ̇ ಮ̇ ಗ̇ | ಪ ದ ನಿ ರಿ̇ | ನಿ ದ ಮ ಗ ‖
‖ ಪ ಮ – ದ ಪ | ನಿ ದ ಗ̇ ರಿ̇ | ಗ̇ ೯ ೯ – ಗ̇ | ರಿ̇ ಸ̇ ನಿ ದ | ಪಾ ೯ – ರಿ̇ | ಸ̇ ನಿ – ದ ಮ | ಪಾ ೯ – ಗ | ಮ ಪ ದ ನಿ ‖

**ರಾಗ** – ಖರಹರಪ್ರಿಯ, (22ನೆಯ ಮೇಳಕರ್ತದಲ್ಲಿ ಉಪಾಂಗ ಜನ್ಯ) **ತಾಳ–ಆದಿ**

**ಆರೋಹಣ**–ಸ ರಿ$_2$ ಗ$_2$ ಮ$_1$ ಪ ದ$_2$ ನಿ$_2$ ಸ. **ಅವರೋಹಣ**–ಸ ನಿ$_2$ ದ$_2$ ಪ ಮ$_1$ ಗ$_2$ ರಿ$_2$ ಸ

1\. || ಸೇ ೯ ೯ ೯ ೯–ಸ ನಿ | ದ ಪಾ ಪ | ಮ ಗ ರಿ ನಿ | ಸಾ ೯ ೯ | ೯ ೯–ಸ ರಿ | ಗ ಮಾ–ಗ | ಮ ಪ ದ ನಿ ||
|| ಸೇ ೯ ರಿ ಸ | ನಿ ದ ನಿ ಸ | ಸೇ ೯ ನಿ ದ | ಪ ಮ ಗ ರಿ | ಸ ೯ ರಿ ಗ | ಮ–ಪ ದ ನಿ | ದ ಪ ಮ–ಗ | ಮ ಪ ದ ನಿ ||

2\. || ನಿ ೯ ೯–ನಿ | ೯ ೯–ನಿ ದ | ಪ ಮಾ ಪ | ಗ ರಿ – ಸ ರಿ | ನಿ ೯ ೯ ನಿ | ೯ ೯ – ನಿ ೯ | ರಿ ೯ ೯ ರಿ | ಗ ಮ ಪ ದ ||
|| ನಿ ೯ ನಿ ೯ | ದ–ಪ ದ ದ | ನಿ ೯ ನಿ ೯ | ದ–ನಿ ಸ ದ | ನಿ ೯ ನಿ ೯ | ದ ಸ ನಿ ದ | ನಿ ೯ ನಿ ೯ | ದ ಪ ದ ನಿ ||
|| ನಿ ನಿ ದ ಪ | ಮ – ನಿ ದ ಪ | ಮ ಗ ನಿ ದ | ಪ ಮ ಗ ರಿ | ನಿ ನಿ ಧ ನಿ | ಸ ರಿ ಗ ಮ | ನಿ ಸ ರಿ ಗ | ಮ ಪ ದ ನಿ ||
|| ನಿ ನಿ ಸ–ನಿ | ನಿ ಸ ರಿ–ನಿ | ನಿ ರಿ ರಿ – ಗ | ಗ ಮ ಗ ಗ | ರಿ ನಿ ಗ ರಿ | ಸ ನಿ – ನಿ ರಿ | ಸ ನಿ ದ – ನಿ | ದ ಪ ದ ನಿ ||

3\. || ದಾದಾ | ಪಮ–ದಾ | ಪಮ–ದಾ | ಪಮಗರಿ | ದಾದಾ | ನಿದದನಿ | ದಾನಿಸ | ರಿಗಮಪ || ದಾದಾ | ನಿದಪದ | ದಾದಾ | ನಿಸದನಿ |
|| ದಾದಾ | ನಿರಿಸನಿ | ದಾದಾ | ನಿಗರಿಸ || ದಾನಿದ | ನಿಸ–ದನಿ | ದಾನಿದ | ರಿನಿ–ದನಿ | ದಾನಿ–ದ | ಗರಿ–ಸನಿ | ದಾನಿಪ | ದದನಿಸ ||
|| ದನಿನಿಸ | ಸರಿರಿಗ | ದಾ೯ನಿ | ಗರಿಸನಿ | ದಾ೯–ರಿ | ಸನಿದಪ | ದಾ೯ನಿ | ದಪದನಿ ||

4\. || ಪಾಪಾ | ಪಾಪಮ | ಗಾಗಾ | ಗಾ–ಗರಿ | ರೀರೀ | ರೀ–ಧನಿ | ರೀಗಸ | ರೀಗಮ || ಪಾಪಾ | ದಪಾಮ | ಪಾಮಾ | ಪಗಾರಿ | ಪಾರೀ |
| ಪಮಗರಿ | ಧನೀ–ಗ | ರೀ–ಪಮ || ಪಮ–ಮಗ | ರಿಸರಿಗ | ಪಮ–ಪಗ | ರಿ–ರಿಗಮ | ಪಮ–ದಪ | ಮ–ಪದನಿ | ಪದದನಿ | ನಿಸಸೇ ||
|| ಪದನಿ–ಗ | ರಿಗ–ಮಗ | ಗರಿನಿರಿ–ರಿ | ಸೇ೯–ಸ | ನಿದಪಾ | ಮಾ–ಪಗ | ರಿಗಾಮ | ೯ಪದನಿ ||

**ರಾಗ – ಶಂಕರಾಭರಣ (29ನೇ ಮೇಳಕರ್ತದಲ್ಲಿ ಉಪಾಂಗ ಜನ್ಯ)** **ತಾಳ–ಆದಿ**

**ಆರೋಹಣ**–ಸ $ರಿ_2$ $ಗ_3$ $ಮ_1$ ಪ $ದ_2$ $ನಿ_3$ ಸ. **ಅವರೋಹಣ**–ಸ $ನಿ_3$ $ದ_2$ ಪ $ಮ_1$ $ಗ_3$ $ರಿ_2$ ಸ

1. || ಸೇ ೬ ಸ | ನಿ ಪ ದ ನಿ | ಪೇ ೬–ಮ | ಗ ರಿ – ಗ ಮ || ಗೇ ೬ – ಮ | ಗ ರಿ–ಸ ನಿ | ಸೇ ರಿ ಗ | ಮ ಪ ದ ನಿ ||
2. || ಸೇ – ಸೇ | ನಿ ಪ ದ ನಿ | ಸೇ ದೇ | ಪ – ಮ ಗ ರಿ | ಸೇ ಸೇ | ರಿ – ಸ ರಿ ಗ | ಸೇ ರಿ ಗ | ಮ ಪ ದ ನಿ ||
3. || ಸೇ ಸ–ನಿ | ದ ಪ ದ ನಿ | ಸೇ ನಿ ದ | ಪ ಮ ಗ ರಿ || ಸೇ ಸ ನಿ | ಸ – ಧ ನಿ ಸ | ಸೇ ಮ ಗ | ಮ ಪ ದ ನಿ ||
4. || ಸೇ ರಿ ನಿ | ದ ಪ ದ ನಿ | ಸ ನಿ ದ ಪ | ೬ ಮ ಗ ರಿ | ಸೇ ನಿ ರಿ | ಗ ಮ ದ ನಿ | ಸ ನಿ ದ ಪ | ಮ ಪ ದ ನಿ ||
5. || ಸೇ ದೇ | ಪ – ದ ನಿ ಸ | ಸ ದೇ ಪ | ಮ ಗ ರಿ ಗ || ಸೇ ಧೇ | ನಿ ಸ ರಿ ಗ | ಸ ರೀ–ಗ | ಮ ಪ ದ ನಿ ||
6. || ನೀ ೬ ದ | ಪ ಮ ಗ ಮ | ನಿ ದೇ ಪ | ಮಾ–ಗ ರಿ || ನೀ ೬ ರಿ | ಗ ಮ–ರಿ ಗ | ನಿ ರೀ ಗ | ಮ ಪ ದ ನಿ ||
7. || ದೇ ೬–ಪ | ಮ ಗ ಮ ಪ | ದೇ ೬ ಮ | ಗ ರಿ ಸ ನಿ || ಧೇ ನಿ ಸ | ಗ ರಿ ಸ ನಿ | ಧೇ ನಿ ಸ | ರಿ ಗ ಮ ಪ ||
|| ದ ಪ ಮ–ಗ | ಮ–ರಿ ಗ ಮ | ದ ಪ ಮ ಗ | ಮ ಪ ದ ನಿ || ದ ನಿ ಸ–ಮ | ಗ ರಿ ಸ ನಿ | ದ ನಿ ಪ ದ | ಮ ಪ ದ ನಿ ||
8. || ಪಾ ಪಾ | ಪ ಮ ಗ ಮ | ಪಾ ಮಾ | ಪ ಮ ಗ ರಿ || ಪಾ ರೀ | ಗ ಮ ಗ ರಿ | ಪಾ ಮ ಗ | ರಿ ಗಾ ಮ ||
|| ಪ ಮ ಪ ಗ | ಮ ರಿ–ಗ ಮ | ಪ ಮ–ದ ಪ | ಮ ಗ–ಮ ಪ || ಪ ಮ ಪ–ನಿ | ದ–ಸ ನಿ ಸ | ಪ ಸ ದ ಪ | ಮ ಪ ದ ನಿ ||
9. || ಮಾ ೬–ಮ | ೬ ೬–ಮ ಗ | ಮ ಪ–ಗ ಮ | ರಿ ಗ–ಸ ರಿ || ಗಾ ೬–ಗಾ | ೬ ೬–ರಿ ಸ | ರಿ ಗ–ರಿ ರಿ | ಸ ನಿ ಧ ನಿ ||
|| ರಿ ೬ ೬–ರಿ | ೬ ೬–ಸ ನಿ | ಸ–ಗ ರಿ–ಮ | ಗ ರಿ–ಸ ನಿ || ಸ ೬ ೬–ಸ | ೬ ೬–ನಿ ಸ | ರಿ ಗ ಮ ಗ | ರಿ ಸ ರಿ ಗ ||
|| ಮಾ ಗ ರಿ | ನಿ–ಸ ರಿ ಗ | ಮಾ–ದ ಪ | ಮ ಗ ಮ ಪ || ಮಾ ನಿ ದ | ಪ ದ ನಿ ಪ | ಮ ಪ ದ ನಿ | ಸ ರಿ ನಿ ಸ ||
|| ಮ ಪ ದ ನಿ–ಸ ರಿ ಗ ಮ | ಮ ಗ ರಿ ಸ | ನಿ ಪ ದ ನಿ || ಸ ರಿ ಸ ನಿ | ದ ಪ–ಸ ನಿ | ದ ಪ ಮ–ಗ | ಮ ಪ ದ ನಿ ||

**ರಾಗ–ಕಾಂಭೋಜಿ** (28ನೇ ಹರಿಕಾಂಭೋಜಿ ಮೇಳದಲ್ಲಿ ಭಾಷಾಂಗ ಜನ್ಯ) **ತಾಳ–ಖಂಡಜಾತಿ ಏಕತಾಳ**

**ಆರೋಹಣ**–ಸ $ರಿ_3$ $ಗ_3$ $ಮ_1$ ಪ $ದ_2$ ಸ. **ಅವರೋಹಣ**–ಸ $ನಿ_2$ $ದ_2$ ಪ $ಮ_1$ $ಗ_3$ $ರಿ_2$ ಸ $ನಿ_3$ ಪ $ದ_2$ ಸ

1. ‖ ಸೇ ೯ ೯ ಸೇ ನೀ ದಾ | ಪಾ ೯ ೯ ಮಾ ಗಾ ರೀ | ಸಾ ೯ ೯ ರೀ ಗಾ ಮಾ | ಪಾ ೯ ೯ ಪಾ ಮ ಗ ಪ ದ ‖
‖ ಸೇ ೯ ರಿ ಗ ಮ ರಿ ಸ ನಿ ದ | ಸೇ ೯ ರಿ ಸ ನಿ ದ ಪ ಮ ಗ | ಸಾ ೯ ರಿ ನಿ ಧ–ಸ ರಿ ಗ ಮ | ಪಾ ೯ ನಿ ದ ಪ ಮ ಗ ಪ ದ ‖

2. ‖ ನೀ ೯ ದ ಪಾ ೯ ದ–ಮಾ | ೯ ಪ–ಮಾ ೯ ಗ–ಸಾ ೯ ರಿ | ಗಾ ೯ ೯ ಗಾ ೯ ೯–ಮಾ | ಪಾ ೯ ೯–ಮಾ ಗ–ಮ ಪ ದ ‖
‖ ನೀ ದ ಮ–ಪ ದ–ಮ ಗ ಮ ಪ | ನಿ ೯ ದ–ಪ ದ ಸ–ಸ ನಿ ಪ ದ | ನೀ ದ ಸ ರಿ ಗ–ಸ ರಿ ನಿ ದ | ನೀ ದ – ಪ ದ ಪ–ಮ ಗ ಪ ದ ‖

3. ‖ ದಾ ಪ–ಮ ಪಾ–ಮ ಗ–ಮಾ | ಗರಿಗಾಸರೀ ಗಾ ಮ | ಗಾ ೯ ೯–ಮಾ ೯ ೯–ಪಾ | ೯ ೯–ಮ ಗ ರಿ–ಸ ರಿ ಗ ಮ ಪ ‖
‖ ದ ಪ ಮ–ಗ ರಿ ಸ–ರಿ ಗ ಮ ಪ | ದ ಪ ದ–ಸ ನಿ ದ–ಪ ದ ದ ಸ | ದ ಸ ರಿ–ಗ ಮ ಗ–ರಿ ಗ ಸ ರಿ | ದ ರಿ ಸ–ಸ ನಿ ದ–ಪ ಮ ಪ ದ ‖

4. ‖ ಪಾ ಪಾ ಪಾ–ಪ ಮ ಮ ಗ | ರಿ ಸ ಪ ದ–ಸಾ ಸಾ ಸಾ | ರಿ ಸ ನಿ ಧ–ಸ ರಿ ಗ ಮ–ಗಾ | ಗಾ ಗಾ – ಮ ಗ – ಸ ರಿ ಗ ಮ ‖
‖ ಪ ಮ ಗ ಮ ಪ–ದ ಪ ದ – ಮ ಗ | ಪ ಮ – ಪ ದ ಮ – ದ ನಿ ದ ದ ಪ | ಪ ದ ಸ ರಿ – ಮ ಗ ಸ ರಿ ನಿ ದ |
‖ ಪ ಸ ನಿ ದ ಪ–ಮ ಗ–ಮ ಪ ದ ‖

5. ‖ ಸಾ ಸ ಮಾ ಗ–ರಿ ಗ ಸ ರಿ | ಗ ಮ ಪ ದ–ಮ ಗ ಪ ದ ದ ಸ | ಪಾ ಪ–ಸೇ ನಿ–ದ ನಿ ಪ ದ | ಮ ಗ ರಿ ಗ–ಸ ರಿ ನಿ ಧ ಪ ಧ ‖
‖ ಸಾ ಸ–ದಾ ಪ ಸ ನಿ ದ ನಿ | ದ ಪ–ಮ ಗ–ಪ ಮ ಗ–ರಿ ಗ ಸ | ಫೇ ಧ ಫೇ ಸ–ಧ ಸ ರಿ ಗ | ಸಾ ರಿ ಗಾ ಮ ಗ ಮ ಪ ದ ‖
‖ ಸೇ ನಿ ದ–ಸ ರಿ ಗ ೯ ಮ ರಿ | ಗ–ಸ ನಿ ದ–ಪಾ ಮ ಗ–ಪ ದ | ದಾ ನಿ–ಪ ದ ಪ ಮ ಗ–ಸಾ | ರಿ ಗ ಮ ಗ – ಮ ಪಾ ದ ರೀ ‖
‖ ೯–ಸೇ ೯–ನಿ ದ ಪ–ಸ ನಿ ದ | ಪ ಮ–ದಾ ೯–ಪಾ ೯ ಮ ಗ | ಮ–ದ ಪ ಮ ಗ ರಿ–ಸಾ ೯ ರಿ | ೯ ೯–ಮ ಗ ಮ–ರಿ ಗ ಮ ಪ ದ ‖

**ರಾಗ**—ವಾಚಸ್ಪತಿ (64ನೇ ಮೇಳ ಕರ್ತ) **ತಾಳ**—ಆದಿ

**ಆರೋಹಣ**—ಸ ರಿ$_2$ ಗ$_3$ ಮ$_2$ ಪ ದ$_2$ ನಿ$_2$ ಸ̇ **ಅವರೋಹಣ**—ಸ̇ ನಿ$_2$ ದ$_2$ ಪ ಮ$_2$ ಗ$_3$ ರಿ$_2$ ಸ

1. ‖ ಸ̇ ಽ ಽ—ನಿ | ಽ ದ ಪ ದ | ನಿ ದ ಽ—ಪ | ಽ ಮ—ಗ ಮ | ಪ ಽ ಽ ಪ | ಪ ಽ — ಮ ಗ | ಮ ಪ ಽ ಗ | ಮ ಪ ದ ನಿ ‖
2. ‖ ಸ̇ ಽ ಸ̇ ಽ | ನಿ ದ—ಪ ದ | ನಿ ಽ ನಿ ಽ | ದ ಪ ಮ ಪ | ದ ಽ ದ ಽ | ಪ ಮ—ಗ ಮ | ಪ ಽ ಪ ಽ | ಮ ಪ ದ ನಿ ‖
3. ‖ ಸ̇ ಽ ರಿ̇—ಸ̇ | ನಿ ದ—ಪ ದ | ನಿ ಽ ಸ̇ ನಿ | ದ ಪ—ಮ ಪ | ದ ಽ ನಿ—ಪ | ದ ಪ ಮ ಪ | ಗ ಽ ರಿ—ಗ | ಮ ಪ ದ ನಿ ‖
4. ‖ ಸ̇ ನಿ ರಿ̇ ಸ̇ | ಽ ನಿ ದ ನಿ | ಪ ಮ ದ ಪ | ಽ ಮ ಗ ರಿ | ಸ ನಿ̣ ದ ನಿ̣ | ಽ—ಗ ರಿ ಗ | ಮ ಪ—ಗ ಮ | ಽ ಪ ದ ನಿ ‖
5. ‖ ನಿ ಽ ಽ ದ | ಪ ಮ—ದ ಮ | ಪ ಽ ಽ ಮ | ಗ ರಿ ಸ ರಿ | ನಿ̣ ಽ ಽ ದ̣ | ನಿ̣ — ಸ ರಿ ಸ | ರಿ ಽ ಽ—ರಿ | ಗ—ಮ ಪ ದ ‖
‖ ನಿ ದ ಪ ಮ | ಪ—ನಿ ದ ಪ | ಮ ಗ—ನಿ ದ | ಪ ಮ ಗ ರಿ | ನಿ̣ ದ̣ ನಿ̣—ರಿ | ಸ—ಗ ರಿ ಗ | ನಿ̣ ಗ ರಿ—ಮ | ಗ ಮ ಪ ದ ‖
‖ ನಿ ದ ಗ̇—ರಿ̇ | ಗ̇ ಮ̇ ಗ̇ ರಿ̇ | ಸ̇—ನಿ ಸ̇—ನಿ | ದ ಪ ಮ—ಪ | ದ—ನಿ ಗ̇ ರಿ̇ | ನಿ ದ—ನಿ ರಿ̇ | ಸ̇ ನಿ ಸ̇—ನಿ | ದ—ಪ ದ ನಿ ‖
6. ‖ ದ ಽ ದ ಽ | ದ ಽ — ಪ ಮ | ಪ ಽ ಪ ಽ | ಪ ಽ — ಮ ಪ | ಗ ಽ ಗ ಽ | ಗ ಽ — ರಿ ಸ | ರಿ ಽ ಗ ಽ | ಮಾ ಪ ಽ ‖
‖ ದಾ ಪ—ಮ | ಪ ಽ ಗ ಮ | ದ ಽ ನಿ—ಮ | ಪ ಽ ರಿ ಗ | ದ ಽ ನಿ—ಪ | ದ ಽ ನಿ ದ | ದ ನಿ—ದ ದ | ನಿ ನಿ ಸ̇ ಽ ‖
‖ ದ ನಿ—ದ ದ | ಮ ಪ ದ ನಿ | ದ ನಿ—ದ ದ | ನಿ—ಸ̇ ನಿ | ದ ನಿ—ನಿ ಸ | ದ—ನಿ ಸ̇ ರಿ | ದ ನಿ—ದ ಗ̇ | ರಿ̇ ಗ̇—ಸ̇ ರಿ̇ ‖
‖ ನಿ ಸ̇—ನಿ ದ | ನಿ—ಪ ದ ನಿ | ದ ಽ ದ—ಗ | ರಿ̇ ಸ̇ ನಿ ದ | ದ ಽ ದ ರಿ̇ | ಸ̇ ನಿ ದ ಪ | ದ ಽ ದ—ಪ | ಮ ಪ ದ ನಿ ‖
7. ‖ ಪ ಽ ಪ | ಽ ಪ ದ | ನಿ ಮಾ ಪ | ರಿ ಗ ಽ ರಿ | ಸ ಽ ಸ | ಽ ಽ—ದ̣ ನಿ̣ | ಸ ರಿ ಽ—ರಿ | ಗ ಽ—ಗ ಮ ‖
‖ ಪ ಽ ಽ ಪ | ಽ ಽ ಪ ದ | ನಿ ಸ ಽ—ಗ | ಮ ಪ ದ ನಿ | ಸ̇ ಽ ಽ ಸ̇ | ಽ ಽ—ನಿ ದ | ನಿ ಪ ಽ ಮ | ರಿ ಗ ಽ ಮ ‖
‖ ಪ ಮ ಪ—ಗ | ಽ ರಿ—ಗ ಮ | ಪ ಮ—ದ ಪ | ಽ ಮ ಪ ದ | ಪ ಮ ನಿ ದ | ಽ—ಮ ಪ ದ | ಪ ಮ—ಪ ದ | ದ ನಿ—ನಿ ಸ̇ ‖
‖ ಪ ದ ನಿ—ದ | ನಿ ಸ̇—ನಿ ಸ̇ | ರಿ̇ ಗ̇ ರಿ̇—ರಿ̇ | ಸ̇—ಸ̇ ನಿ—ನಿ | ದ—ಪ ಽ ಸ̇ | ನಿ ದ—ಪ ಽ | ನಿ ದ ಮ—ಪ | ಽ—ಪ ದ ನಿ ‖

**ರಾಗ–ತೋಡಿ** (8ನೇ ಮೇಳ ಕರ್ತದಲ್ಲಿ ಉಪಾಂಗಜನ್ಯ) **ತಾಳ**–ತ್ರಿ ಶ್ರ ತ್ರಿ ಪು ಟ.

**ಆರೋಹಣ**–ಸ ರಿ$_1$ ಗ$_2$ ಮ$_1$ ಪ ದ$_1$ ನಿ$_2$ ಸ **ಅವರೋಹಣ**–ಸ ನಿ$_2$ ದ$_1$ ಪ ಮ$_1$ ಗ$_2$ ರಿ$_1$ ಸ

1. ‖ಸ ॰ ॰ | ॰ ॰ ರಿ ನಿ | ದ ಪಾ | ಗ ರಿ ಸ ನಿ | ಸಾ ॰ | ॰ ॰ ಸ ರಿ | ಗಾ ಗ | ಮ ಪ ದ ನಿ ‖
‖ಸ॰ರಿಸನಿದ|ನಿ॰॰॰–ನಿ॰ಸನಿ|ದಪದಾ॰॰–|ದಾನಿದ–ಪಮಪಾ|॰॰–ಗಾಮಪ|ಮಾಪದ|ಪಾದನಿ|ಸರಿನಿಸ॰ನಿ|ದಪಮ–ಗಮಪದನಿ‖

2. ‖ನಿ ॰ ದ | ಮಾ ಗಾ | ನಿ ದ | ಮ ಗ ರಿ ನಿ | ಸಾ ॰ | ॰ ॰ ನಿ ॰|ರಿ ॰ ಗ | ॰ ಮ ಪ ದ ‖ನಿನಿದ–ಮಗಮ|ದನಿದಪಮಗರಿಸ|ನಿನಿಧ–ನಿಸರಿ|
| ಗಮ–ಗಮಪ–ಮಪದ | ನಿಸರಿ–ನಿಗರಿ | ನಿದಪಮ–ನಿದಮ–ಗ | ಮ–ಪಮಗರಿಸ | ನಿಸರಿಗಮಪದನಿ‖

3. ‖ ದಾ ಪ | ॰ ಮ ಗ ಮ | ಪ – ಮ ಗ | ರಿ–ನಿ ಸ ರಿ|ಗಾ ॰|॰ ॰ ಗ ಮ |ಪಾ ದ | ಪ – ಗ ಮ ಪ ‖ ದಪಾಮ–ಗಮ|ಪಮದಪಾ–ಪಮಗ‖
‖ ರಿಗದಪಾಮ | ಗರಿ–ಸರಿದಪಾದ | ನಿದಗರಿ–ಸ॰ | ॰ಸನಿದಪಮ–ಪಾ | ॰ದಪಮಗರಿ | ಗಾ॰–ಗಮಪದನಿ ‖

4. ‖ ಪಾ॰–ಪಾದ|ಪಮಪಮಗರಿಗ–ಪ|ಮಾ॰–ಮಾಪ|ಮಗ–ಮಗರಿಸರಿ–ಮಗಾ॰–ಗಾ|ಸು|ಮಗರಿ–ಗರಿನಿಸ–ಗ|ರಿ॰॰–ರಿ॰ಗ|ರಿ–ನಿಸಾ॰–ರಿಗಮ ‖
ಪಪಮಗರಿ–ಗ | ಮಪದನಿಸ–ದಗರಿ|ದನಿರಿ–ನಿರಿ–ಗ | ಮ–ಗಗರಿ–ಸರಿ–ಗ॰|॰–ರಿ॰ಗರಿಸ|ನಿದ–ರಿ॰॰ಸ॰ರಿ|ಸನಿದಪ–ಗಾ|॰ಮಾ–ಗಮಪದನಿ ‖

**ರಾಗ – ಖಮಾಚ್.**(28ನೇ ಹರಿಕಾಂಭೋಜಿ ಮೇಳದಲ್ಲಿ ಭಜಾಷಾಂಗನ್ಯ) **ತಾಳ–ತ್ರಿಪುಟತಾಳ** ೦೦

**ಆರೋಹಣ**–ಸ ಮ$_1$ ಗ$_3$ ಮ$_1$ ಪ ದ$_2$ ನಿ$_2$ ಸೆ. **ಅವರೋಹಣ**–ಸೆ ನಿ$_2$ ದ$_2$ ಪ ಮ$_1$ ಗ$_3$ ರಿ$_2$ ಸ

1. || ಸಾ ೯ ನೀ ದಾ | ಪಾ ೯ ಮಾ ಗಾ | ಮಾ ೯ ೯ ೯ – ಸಾ | ಮಾ ಗ – ಮ ಪ ದ ನಿ ||
|| ಸೇ ೯ ೯ – ರಿ ಸ ನಿ ದ | ನಿ ೯ ೯ ಸ ನಿ ದ ಪ | ಮಾ ೯ – ಪ ಮ ಗ ಸ | ಮಾ – ಗ ಮ ಪ ದ ನಿ ||

2. || ನಿ ೯ ದಾ ಪಾ ದ | ೯ – ಪಾ ಮಾ ಗ ಪ | ಮಾ ೯ – ೯ ೯ ೯ – ಗ | ಮಾ ಮ – ಪಾ ಪ ದ ||
|| ನೀದಪಮುಗ–ಮಾಪ–ಗಮಾಪದ | ನೀದಪ–ದಪಮಗಸ–ಪಮಗಮಪ | ನೀದನಿಸೆರಿ–ನಿಸೆದನಿ–ಪದನಿಸೆ | ನೀದಪ–ಮಗಸಾ–ಮಗಮಪದನಿ ||

3. || ದಾ ಪ – ಮ ಪಾ ಮ | ಗ ಮಾ ಗ ಸ ಮ ಗ | ಮಾ ೯ ೯ ೯ – ಪ ಮ | ಗ – ಸಾ ಮ ಗ ಮ ಪ ||
||ದಾಪ–ಮಗಮ–ದಪಮಗ–ಸಮಗಮ|ದಾನಿಪದನಿ–ಸೆನಿದಪ–ದನಿರಿಸೆ|ದಾನಿ–ಸೆನಿಸೆ–ಮಗಮ–ರಿಗ–ಸೆನಿದ|ದಾನಿ–ಪದನಿ–ದಪಮಗ–ಮಪದನಿ||

4. || ಪಾಪಾ–ದಪಮಗಮಾ–ಮಾಪಮ | ಗರಿ–ಗಾಗಾ–ಮಗಸಾ ಮಗಮಪ || ಮಗಮಾ೯೯೯೯ ಪಾಮಗಮ | ಪಾ೯–ಪಾಪ–ದನಿದೇ೯ದಪಮ ||

ಪಪಮಗಮಪ–ದಪಮಗ–ಮಪದನಿ|ಪಪದ–ದನಿದ–ನಿಸೆದನಿ–ಪದನಿಸೆ||ಪದನಿ–ಸೆನಿಸೆ–ಮಗಮ–ರಿಗಸೇರಿ|ಸೆನಿದಪ–ಸೆನಿದಪಮ–ಗಮಪದನಿ||

5. ||ಸಾಸ–ಮಾಮಮಗಮಪಾ–ಪದನಿ|ಪಾಪಸೇ೯ಸೆ–ಸೆನಿದಪ–ದನಿರಿಸೆ|ಸೆನಿದಪ–ಮಪದ–ನಿದಪಮ–ಗಮಪ|ದಪದ–ಮಗಮಪ–ಪಮ–ಗಸಮಗಮ||

||ಪಮಾ–ದಪಮ–ನಿದಾಸೆನಿದ–ಸೆನಿ|೯–ರಿನಿಸೆ–ಮಗೇ–ಮರಿಗ–ಸೇ೯ಸ–ಪ|೯–ದನಿರಿಸೇ೯–ಸೆನಿದಪಮ–ಪಾ|೯ದಪಮಗಸ–ಮಾ೯ಗ–ಮಪದನಿ||

# ವರ್ಣಗಳು

**ರಾಗ**—ಖರಹರಪ್ರಿಯ (22ನೇ ಮೇಳ ಕರ್ತ ದಲ್ಲಿ ಉಪಾಂಗ ಜನ್ಯ) **ತಾಳ**—ಆದಿ

**ಆರೋಹಣ**—ಸ ರಿ$_2$ ಗ$_2$ ಮ$_1$ ಪ ದ$_2$ ನಿ$_2$ ಸ

**ಅವರೋಹಣ**—ಸ ನಿ$_2$ ದ$_2$ ಪ ಮ$_1$ ಗ$_2$ ರಿ$_2$ ಸ

**ಪಲ್ಲವಿ** || ಮುದ್ದು ಗುಮ್ಮ ಮದನುನಿ || ಯುದ್ಧ ಮಂದು ಬಿದ್ದೆ ಬಡೆನುರ||

**ಅನುಪಲ್ಲವಿ** || ಗದ್ದರಿ ಕಾಡ|ಪದ್ಮ ಪುರೀಶ || ವದ್ದಿಕೇಗಿ ತಮಿದೀರ್ಚರ.

**ಚರಣ** || ನಿದ್ದುರಗಾಚಿ | ಯೇ ವೇಳ || ಸದ್ದು ಲೇಕಯುನ್ನ ದಿರ || ಸುದ್ದಲ ವೇಗ ನಾಲ ಗಿಂಚಿ || ಪೆದ್ದ ಮನಸು ಚೂಡರ ವರದ.

## ಪಲ್ಲವಿ

| | | | | | | | |
|---|---|---|---|---|---|---|---|
| ಮಾ ಪಾ | ಮಾ ॰ ॰ | ಗ ರಿ ಗ ಮ | ಮ ಗ ರಿ ಸ̣ | ರಿ ಸ ರಿ ಗ | ರಿ ಸ ರಿ ಸ | ನಿ̣ ಧ̣ ಧ̣ ನಿ̣ | ನಿ̣ ಸ ರಿ ಗ |
| ಮುದ್ದು | ಗು — — | ಮ್ಮ — — — | — — — — | ಮ — — ದ | — — — | ನು — — — | ನಿ — — — |
| ಮ ಗ ಗ ರಿ | ಸ ರಿ ಗ ಮ | ಗ ರಿ ಗ ಮ | ದ ಪಾ ದ | ಪ ದಾ ನಿ | ದ ಪ ಮ ಪ | ॰ ಪ ಮ ಗ | ರಿ ಸ ರಿ ಗ |
| ಯು — — — | ದ್ಧ — ಮ ಂ | — — — — | ದು — — | ಬಿ — ದ್ದೆ | — — ಬ — | — ಡೆ — — | ನು — ರ — |

## ಅನುಪಲ್ಲವಿ

| | | | | | | | |
|---|---|---|---|---|---|---|---|
| ಗ ಮ ಪಾ | ದ ನಿ ದ ಪ | ಮ ಪ ಪ ಗ | ರಿ ಗಾ ಮ | ಪ ಮ ಪ ದ | ಪ ದ ನಿ ದ | ಪ ದ ನಿ ನಿ | ದ ನಿ ಸಾ |
| ಗ — — | ದ್ದ — — — | ರಿ — — ಕಾ | — ಡ — | ಪ — — ದ್ಮ | — — — — | ಪು — — — | ರೀ — ಶ |

‖ ರಿ ಸ ನಿ ದ | ನಿ ಸ ರೀ | ಗ ಮ ಗೇ | ಗೇ ಗ ರಿ | ಸ ನಿ ಗ ರಿ | ಗ ಸ ನಿ ದ | ನೀ ದ ಪ | ಮ ಗ ರಿ ಗ ‖
‖ ವ – – – | ದ್ದಿ – – | ಕೇ – – | ಗಿ – – | ತ – – – | ಮಿ – – – | ದೀ – ಚ | – ರ – – ‖

**ಚಿಟ್ಟೆಸ್ವರ**

‖ ಮಾ ೯ ಗ | ಮ ಪ ರಿ ಗ | ಮ ಪ ದ – ಮ | ದ ಪಾ ಮ | ಗಾ ೯ ಪ | ಮ ಗಾ ರಿ | ಸ ರಿ ೯ ಗ | ಗಾ ಮ ‖
‖ ಪ ಮ ಗ ಮ | ೯ ಪ ದ ಪ | ರಿ ದೀ ನಿ | ಪ ದ ನಿ ಸ | ರಿ ನೀ ದ | ಪ ಮ ಗ ಪ | ೯ ಮ ಗ ರಿ | ೯ ಸ ರಿ ಗ ‖

**ಚರಣ**

‖ ನಿ ೯ ೯ ೯ | ನಿ ದ ದ ಪ | ಮಾ ೯ ಗ | ಗಾ ಗ ರಿ | ರಿ ೯ ೯ ೯ | ೯ ೯ ಸಾ | ೯ ೯ ರಿ ಗ | ಮ ಪಾ ದ ‖
‖ ನಿ – – – | ದ್ದು – – – | ರ – – | ಗಾ – – | ಚಿ – – – | – – ಯೇ | – – ವೆ ೯ | – – ಳ ‖

1. ‖ ನಿ ೯ ೯ ೯ | ೯ ೯–ದಾ | ಪಾ ಮಾ | ೯ ೯ ಗಾ | ರೀ ಸಾ | ೯ ೯–ರೀ | ಗಾ ಮಾ | ಪಾ ದಾ ‖

2. ‖ ನಿ ೯ ದ ಪ | ದ ಮ ಪ ದ | ನಿ ದಾ ಪ | ಮ ಪ ಗ ರಿ | ನಿ ೯ ಧ–ನಿ | ಸಾ ರಿ ೯ | ನಿ ರಿ ೯–ಗ | ೯ ಮ ಪ ದ ‖

3. ‖ ನಿ ದ ನಿ–ಪ | ಮ–ದ ಪ ಮ | ಗ ಮ ಪ–ರಿ | ಗ ಮ–ರಿ ಗ ನಿ ಸ ರಿ–ಗ | ರಿ–ಸ ರಿ ಗ | ಮ ಗ ರಿ–ಪ | ಮ ದ ಪ ದ ‖

4. ‖ ಸ ೯ ೯ ಸ | ೯ ೯–ನಿ ದ | ಸ ನಿ ೯ ದ | ಪ ಮ ಗ ರಿ | ಸ ೯ ೯–ಸ | ೯ ೯–ರಿ ಗ | ಮ ಪಾ–ಪ | ಮ–ಪ ದ ನಿ ‖
‖ ಸ ರಿ ೯–ಸ | ನಿ ದ–ಪ ದ | ನಿ ದಾ–ಪ | ಮ ಗಾ ರಿ | ಸ ನಿ ೯–ಧ | ನಿ–ಧ ಗ ರಿ | ಮ ಗಾ–ಪ | ಮ–ಪ ದ ನಿ ‖
ದ ಪ–ಗ ರಿ | ೯ ಗ–ನಿ ದ | ಪ ಗಾ ಮ | ಸ ರಿ ಗ ಮ | ರಿ ಗ ಮ–ಗ | ಮ ಪ–ಮ ಪ | ದ–ನಿ ದ ಪ | ದ–ನಿ ಸ ದ ‖
ನಿ ನಿ–ರಿ ರಿ | ೯–ಗ ರಿ ಗ | ಮ ಗ ೯–ರಿ | ಗ ಸೇ–ರಿ | ನಿ ೯ ದ–ನಿ | ಪಾ ಮ–ಪ | ಗಾ ರಿ–ಗ | ಮ–ಪಾ ದ ‖

## ಸಂಪೂರ್ಣ ಚರಣ

| | | | | | | | |
|---|---|---|---|---|---|---|---|
| ನಿ , , , | ನಿ ದ ದ ಪ | ಮಾ , ಗ | ಗಾ ಗ ರಿ | ರಿ , , , | , , ಸಾ | , , ರಿ ಗ | ಮ ಪಾ ದ |
| ನಿ – – – | ದ್ದು – – – | ರ – – | ಗಾ – – | ಚಿ – – – | – – ಯೇ | – – ವೇ | – – ಳ |
| ಪಾ ರಿ , | – ಮ ಗ ಪ ಮ | – ದಾ ಪಾ | ದ ಪಾ ಮ | ರಿ ಗ ಷು – ಗ | ಮ ಪ – ಮ ಪ | ದ ನಿ ದ – ಪ | ದ ನಿ ಸೇ |
| ಸೇ – – | ದ್ದು – – – | ಲೇ – | ಕ – – | ಯು – ನ್ನ | – – – – | ದಿ – – – | – – ರ |
| ಸ ನಿ ದ – ನಿ | ಸ – ದ ನಿ ಸ | ಸ ನಿ ರಿ ಸ | ಗ ರಿ ಸ ರಿ | ನಿ ಸೇ ನಿ | – ಗ ಗ ರಿ ರಿ | ಸ ನಿ ದ ನಿ | ಪ ದ ಮ ಪ |
| ಸು – – ದ್ದು | – ಲ – – | ವೇ – – – | ಗ – – – | ನಾ – – | ಲ – – – | ಗಿಂ – – | ಚಿ – – – |
| ಮ ಗ ರಿ – ಗ | ಮ ಪ – ಮ ಪ | ನಿ ದ ಸ ನಿ | ರಿ ಸ ನಿ ಸ | ನಿ ದ ಪ ದ | ಮ ಪ – ಪ ಮ | ಗ ಮ – ರಿ ಗ | ರಿ – ಸ ರಿ ಗ |
| ಪ – – – ದ್ದ | – – ಮ – | ನ – – – | ಸು – – – | ಜೂ – – – | ಡ – ರ – | ವ – – ರ – | ದ – – – – |

## ಚಿಟ್ಟೆಸ್ವರ

| | | | | | | | |
|---|---|---|---|---|---|---|---|
| ಮಾ , – ಗ | ಮ ಪ – ರಿ ಗ | ಮ ಪ ದ – ಮ | ದ ಪಾ ಮ | ಗಾ , – ಪ | ಮ ಗಾ ರಿ | ಸ ರಿ , – ಗ | , ಗಾ ಮ |
| ಪ ಮ ಗ | ಮ , ಪ – ದ ಪ | ದ ದಾ ನಿ – | ಪ ದ ನಿ ಸ | ರಿ ನೀ – ದ | ಪ ಮ ಗ ಪ | , ಮ ಗ ರಿ | , ಸ ರಿ ಗ |

**ಸೂಚನೆ**—ಪಲ್ಲವಿಯನ್ನು ಮತ್ತೆ ಹಾಡಿ ಮುಗಿಸಬೇಕು.





**ರಾಗ–ಮೋಹನ** (28ನೆಯ ಹರಿಕಾಂಬೋಜಿಯಲ್ಲಿ ಉಪಾಂಗಜನ್ಯ) **ತಾಳ–ಆದಿ**

**ಆರೋಹಣ–** ಸ ರಿ$_2$ ಗ$_3$ ಪ ದ$_2$ ಸ. **ಅವರೋಹಣ–** ಸ ದ$_2$ ಪ ಗ$_3$ ರಿ$_2$ ಸ

**ಪಲ್ಲವಿ** || ಚಿಗುರು ಬೋಣಿ ನಿನ್ನೆಡ ಬಾಸಿ || ಚೀಕಾಕು ಪಡುಚುನ್ನದಿರಾ ||

**ಅನುಪಲ್ಲವಿ** || ವಗಕಾಡ | ಪದ್ಮಪುರಿ ವರದ || ವದ ಪು | ದೀರ್ಚ ವೇಗನೇಲು ಕೊನರಾ ||

**ಚರಣ** || ದಿಗುಲೊಂದಿಯುನ್ನ ಈ ವೇಳ || ಪಗಲು ರೇಯಿ ಯೊಕತೀರು || ತಗವುಲಾಡುಚುಂಡುಟ ದಗುನೇರಾ | ಪದ್ಮಪುರಿವರದ ||

## ಪಲ್ಲವಿ

| | | | | | | | |
|---|---|---|---|---|---|---|---|
| ಪ ಗ ಗ ರಿ | ರಿ ; ; ; | ಸ ಸ ರಿ ರಿ | ಗ ಗ ರಿ ರಿ | ಸ ರಿ ಗ–ಸ | ರಿ ಸ–ಸ ಧ | ಧ ಸ ; ಸ | ರಿ ಸ ರಿ ಗ |
| ಚಿ – – ಗು | ರು – – – | ಬೋ ; – – | ಣಿ – – – | ನಿ – – ನ್ನೆ | – – ಡ – | ಬ – – – | – ಸಿ – – |
| ಪ ಗ ರಿ–ಸ | ಧ ಸ ರಿ–ಗ | ಸ ರಿ ಗ–ಧ | ಸ ರಿ ಗ ಪ | ದ ಸ ;–ದ | ಪ ಗ ದ ಪ | ;–ಗ ರಿ ಸ | ಧ ಸ ರಿ ಗ |
| ಚಿ – – ಕಾ | – – ಕು – | ಪ – – ಡು | – – – – | ಚು – – – | – – ನ್ನ – | – – – – | ದಿ – ರ – |

## ಅನುಪಲ್ಲವಿ

| | | | | | | | |
|---|---|---|---|---|---|---|---|
| ಪ ಸ ದ ; | ಪ ; ; ಪ | ರಿ ; ಗ ರಿ | ಗ ಗ ಪ ; | ಗ ಪ ಗ ಪ | ದ ಪ ದ ಪ | ಪ ದ ಗ ಪ | ದ ದ ಸ ; |
| ವ – ಗ . | ಕ . – ಡ | – . – . | ಪ – ದ್ಮ . | ಪು – . ರಿ | ; . ವ – | – . ರ – | ದ – . – |
| ಸ ರಿ ಸ ದ | ಸ ರಿ ಸ ರಿ | ಗ ; ಸ ರಿ | ದ ಸ ದ ಪ | ದ ರಿ ಸ ; | ದ ಪ ದ ಪ | ; ಗ ರಿ ಧ | ಸ ; ರಿ ಗ |
| ಪ – ಗ . | ಪು – ದಿ . | . – ರ್ಚ . | ವೇ ; ಗ . | – ನೇ ; . | ಲು . ಕೊ ; | – ನ . ರಾ | . – . . |

## ಚಿಟ್ಟೆಸ್ವರ

ಪ ಗ ರಿ ರಿ | ; ಗ ರಿ ಗ | ಸ ; ರಿ ಧ | ಸ ಧ ರಿ ಧ | ಸ ; ; ; | ; ಪ ಧ ಸ | ರಿ ಗ ರಿ ; | ; ಸ ರಿ ಗ ||
ಪ ಗ ರಿ ಗ | ಗ ಪ – ದ | ಗ ಪ ದ ಸ | ಗ ಪ ದ ಸ | ರಿ ಗ ರಿ ಸ | ; ದ ಪ ಗ | ; ಪ ಗ ರಿ | ; ಸ ರಿ ಗ ||

## ಚರಣ

ದ; ದ; | ಪ ದ ಸ; | ಸ ದ ದ; | ಪ; ; ; | ಪ ಗ – ದ ದ | ಪ – ಗ ಪ; | ರಿ; ; ಸ | ; – ರಿ ಗ ಪ ||
ದಿ ಗು | ಲೊಂ – | ದಿ – – | – – – | ಯು – – – | – – ನ್ನ – | ಈ – ವೆ | ; ಳ – – ||

|| ದ; ; ; | ; ; – ಪ; | ; ; – ಗ; | ರಿ; ಗ; | ; ; ಸ ; | ; ; ರಿ; | ; ; ಗ; | ; ; ಪ ; ||

|| ದಾ ಪ–ಗ | ಪ–ರಿ; ಗ | ದ ಪಾ–ಪ | ಗ ರಿ–ಸ ರಿ | ಧ; ಸ–ರಿ | ಗ–ಸಾ ರಿ | ದ ಪಾ–ಗ | ರಿ; ಗ ಪ ||

|| ದ ಪ ದ–ಗ | ಪ–ರಿ ಗ ಪ | ಸ ರಿ ಗ ಪ | ಗ ರಿ ಸ ರಿ | ಸ ಗ ರಿ–ಸ | ರಿ ಸ ಧ–ಧ ಸ | ರಿ ಸ–ಗ ರಿ | ಪ ಗ–ದ ಪ ||
|| ರಿ ಗ ಪ–ಸ | ರಿ ಗ ಪ–ಧ | ಸ ರಿ ಗ ಪ | ದ ಪ ಗ ಪ | ದ ಗ ರಿ ಸ | ದ ಪ – ದ ಪ | ಗ ರಿ ಸ – ಧ | ಸ ರಿ ಗ ಪ ||

|| ಸ; ;–ಸ | ; ;–ಗ ರಿ | ಸ ದ ಪ–ಗ | ರಿ ಸ–ಧ ರಿ | ಸಾ ;–ಸ | ; ;–ಧ ಸ | ರಿ ಗ–ಸಾ | ರಿ ಗ ಪ ದ ||
|| ಸ ರಿ;–ಸ | ದ ಪ–ದ ಸ | ಗಾ ಪ–ದ | ಪಾ ಗ ರಿ | ಸ ಧ;–ಸ | ರಿ ಗ–ಸ | ರಿ ಗ ಪ–ರಿ | ; – ಗ ಪ ದ ||
|| ಗ ರಿ–ಸ ರಿ | ; ಗ–ಪ ಗ | ರಿ ಗಾ ಪ | ದ ಪ ಗ ಪ | ಪ ದ ಸ–ಪ | ; ದ–ಗ ಪ | ರಿ ಗ ಪ ದ | ಸ; ; ; ||
|| ಸ ದ–ಗ ರಿ | ; ಗ–ಸ ಗ ರಿ–ಸ; ರಿ | ದ ಸ ರಿ ಗ | ದಾ–ದ ಸ | ಪಾ–ಪ ದ | ಗಾ–ಗ ಪ | ರಿ;–ಗ ಪ ||

## ಸಂಪೂರ್ಣ ಚರಣ

| | | | | | | | |
|---|---|---|---|---|---|---|---|
| ದಾ ದಾ | ಪ ದ ಸೇ | ಸ ದ ದಾ | ಪಾ ೯ ೯ | ಪ ಗ_ದ ದ | ಪ ಗ ಪಾ | ರೀ ೯ ೯_ಸ | ೯_ರಿ ಗ ಪ |
| ದಿ ಗು | ಲೊಂ _ _ | ದಿ _ _ | _ _ _ | ಯು _ _ _ | _ ನ್ನ _ | ಈ _ ವೇ | _ ಳ _ _ |
| ದ ಪ_ಗ ರಿ | ಸ_ರಿ ಗ ರಿ | ಸ ರಿ ಗ_ದ | ಸ ರಿ ಗ ಪ | ಸ ರಿ_ ಗ ಪ | ದ_ಗ ದ ಪ | ಪ ಗ_ದ ಪ | ದಾ ೯ ೯ |
| ಪ _ ಗ _ | _ ಲು _ _ | ರೇ _ _ ಯಿ | _ _ _ _ | ಯೊ _ _ _ | _ ಕ _ _ | ಶೀ _ _ _ | ರು _ _ |
| ದ ಸ̇_ಪ ದ | ಗ ಪ ದ _ ದ | ಪ ಪ_ಗ ರಿ | ಗ ಪ ಗ ರಿ | ಸ ರಿ _ ಗ ರಿ | ಗ ಪ_ಗ ಪ | ದ ಪ_ರಿ ಗ | ಪ ದ ಸೇ |
| ತ _ _ _ | ಗ _ ವು _ | _ _ _ _ | ಲಾ _ _ _ | ಡು _ _ _ | _ _ ಚು _ | _ ಂ _ ಡು | _ _ ಟ |
| ದ ಸ̇_ಸ̇ ರ̇ಿ | ೯ ರ̇ಿ_ಸ̇ ರ̇ಿ | ಗ _ ರೀ ಗ | ಸ̇ ರ̇ಿ_ದ ಸ̇ | ಪ ದ _ ಗ ರ̇ಿ | ೯_ಸ̇ ದ ಪ | ದ ಪಾ ಗ | ರಿ _ ಸ̣ ರಿ ಗ |
| ದ ಗು _ _ | _ _ ನೇ _ | _ _ _ _ | ರಾ _ ಪ _ | ದ್ಮ_ ಪು ರಿ | _ _ _ _ | ವ ರ _ | _ _ ದ _ _ |

## ಚಿಟ್ಟೆಸ್ವರ

| | | | | | | | |
|---|---|---|---|---|---|---|---|
| ಪ ಗ ರಿ_ರಿ | ೯ _ ಗ ರಿ ಗ | ಸಾ ರಿ _ ಧ̣ | ಸ_ಧ̣ ರಿ_ಧ̣ | ಸಾ ೯ ೯ | ೯_ಪ̣ ಧ̣ ಸ̣ | ರಿ ಗ ರೀ | ೯ _ ಸ̣ ರಿ ಗ |
| ಪ ಗ ರಿ_ಗ | ಗ ಪ ದ ಪ | ಗ_ಪ ದ ಸ̇ | ಗ ಪ ದ ಸ̇ | ರ̇ಿ ಗ ರ̇ಿ_ಸ̇ | ೯ ದ ಪ_ಗ | ೯ ಪ ಗ_ರಿ | ೯ _ ಸ̣ ರಿ ಗ |

**ಸೂಚನೆ**—ಪಲ್ಲವಿಯನ್ನು ಮತ್ತೆ ಹಾಡಿ ಮುಗಿಸಬೇಕು.

**ರಾಗ–ಆರಭಿ** (29ನೇ ಧೀರ ಶಂಕರಾಭರಣ ಮೇಳದಲ್ಲಿ ಉಪಾಂಗ ಜನ್ಯ) **ತಾಳ–ಆದಿ**

**ಆರೋಹಣ**–ಸ ರಿ$_2$ ಮ$_1$ ಪ ದ$_2$ ಸ. **ಅವರೋಹಣ**–ಸ ನಿ$_3$ ಧ$_2$ ಪ ಮ$_1$ ಗ$_3$ ರಿ$_2$ ಸ.

**ಪಲ್ಲವಿ** || ಪಾಪ ಜಾತಿ–ಮಾರುನಿ ಬಾರಿ–ಕೋರ್ವಲೇಕ || ರೇಪಗ–ಲೇ ತೀರು ಉನ್ನದಿರಾ | ಸಾಮಿ ||
**ಅನುಪಲ್ಲವಿ** || ಈ ಪಾಟಿ ಚಲಮು ಸೇಯ ಮೇರರಾ || ಶ್ರೀ ಪತೇ | ಪದ್ಮ ಪುರಿ ನೇಲು–ವರದ ||
**ಚರಣ** || ನೀ ಪೈ ಮರುಲ ದಾಚ ಜಾಲಕ|ತಾಪ ಮೊಂದಿಯುನ್ನ ವನಿತ || ದಾಪು ಜೇರ್ಚಿಮದಿ ಚಲ್ಲ ಜೇಸಿ|ಕಾಪಾಡರ|ಶ್ರೀ ಪದ್ಮಪುರಿವಾಸ ||

## ಪಲ್ಲವಿ

| | | | | | | | |
|---|---|---|---|---|---|---|---|
| ಪಾ ॥ ॥ | ಪ ಮ – ಮ ಪ | ಮ ಗ ರಿ – ಸ | ರಿ – ಮ ಗ ರಿ | ರೀ ॥ – ರಿ | ಸ – ಸ ನಿ ಧ | ಧ ಸೇ – ಸ | ರಿ – ಸ ರಿ ಮ |
| ಪಾ ॥ ॥ | ಪ ॥ ಜಾ – | ತಿ – – ಮಾ | – ರು – – | ನಿ – ಬಾ | – ರಿ – – | ಕೋ – ರ್ವ | – ಲೇ – ಕ |
| ರೀ – ಮ ಗ | ರಿ – ಸ ರಿ ಮ | ಧ ಸ – ರಿ ಮ | ಪ ಮ – ಪ ದ | ದ ಸೇ ನಿ | ದ ಪ – ದ ಪ | ॥ ಮ ಗ ರಿ | ಧ ಸ ರಿ ಮ |
| ರೇ ಪ – | – ಗ – – | ಲೇ ॥ – – | ತೀ – ರು – | ಉ – – | ನ್ನ – ದಿ ರಾ | – – – – | ಸಾ – ಮಿ – |

## ಅನುಪಲ್ಲವಿ

| | | | | | | | |
|---|---|---|---|---|---|---|---|
| ದಾ ॥ ॥ | ಪ ಮ – ದ ಪ | ಮ ಗ ರಿ – ಪ | ಮ ಗ – ರಿ ಪ | ರೀ ॥ – ಮ | ಗ ರಿ – ಸ ರಿ | ರಿ ಪ – ಮ ಗ | ರಿ ಮ ಪ ದ |
| ಈ – – | ಪಾ – ಟಿ – | ಚ – – – | – – ಮು – | ಸೇ – – | – – ಯು – | ಮೇ – – – | ರ – ರಾ – |
| ದಾ ॥ – ಸ | ನಿ ದ – ಸ ರಿ | ಸ ರಿ – ಮ ಗ | ರಿ – ಸ ರಿ ಸ | ನಿ ದ – ಸೇ | ನಿ ದ ಪ – ಪ | ॥ ಮ ಗ ರಿ | ಧ ಸ ರಿ ಮ |
| ಶ್ರೀ – ಪ | – – ತೇ – | ಪ – ದ್ಮ – | – ಪು – ರಿ | – ದ ನೇ | – – ಪ ಲು | – – ವ – | ರ – ದ – |

## ಚಿಟ್ಟೆಸ್ವರ

ಪಾ ; – ದ | ಮ ಪ – ಮ ದ | ; – ಪ ಮ ಗ | ರಿ ಪ ಮ ಗ | ರಿ ; ; – ಸ | ರಿ ಸ ನಿ ಧ | ಸ ಸ ರಿ ರಿ | ಮ ಗ ರಿ ಮ ||
ಪಾ ; ದ | ಮ ಪ ದ ಸ ನಿ | ದ ರಿ ಮ | ಗ ರಿ ಸ ನಿ | ದ ರಿ ಸ ; | ನಿ ದ ಪ ಪ | ; ಮ ಗ ರಿ | ಸಾ ರಿ ಮ ||

## ಚರಣ

| | | | | | | | |
|---|---|---|---|---|---|---|---|
| ಪಾ ದ॰ | ಪಾ ಆ | ದ ಪ ಮ ಗ | ರಿ ಮ ಪ ದ | ದಾ – ದ ರಿ | ಸ ನಿ ದ ಪ | ದ ಪ – ಮ ಗ | ರಿ – ಸ ರಿ ಮ |
| ನೀ – | ಪೈ – | ಮ – – – | ಲ – – – | ದಾ ಚ – | – – – – | ಚಾ – ಲ – | – ಕ – – |

|| ಪಾ ; ದ | ; ; – ಪಾ | ; ; ಮಾ | ; – ಗ – ರಿ ; | ಸಾ ; – ನಿ | ಧ ; ; – ಸ | ಸಾ ; – ಸ | ; – ರಿ ; ಮ ||

2. || ಪಾ – ದ ದ | ಪ – ಮ ಪಾ | ಪ ಮ ಗ – ರಿ | ಪ ಮ ಗ ರಿ | ಸಾ ಸ ನಿ | ಧ – ಧ ಸಾ | ರಿ ಮ ಗ | ರಿ ; ಸ ರಿ ಮ ||

3. || ಪ ದ ಪ ಮ | ಗ ರಿ – ರಿ ಪ | ಮ ಗ ರಿ – ಸ | ರಿ ಮ ಗ ರಿ | ಸ ರಿ ಸ – ಸ ನಿ ಧ ಸ ರಿ ಮ ಗ ರಿ – ರಿ | ರಿ ಪ ಮ ಪ ||
|| ಸ ರಿ ಮ ಪ | ದ – ರಿ ಮ ಪ | ದ ಸ – ಮ ಪ ದ ಸ ರಿ – ಸ ರಿ ಮ ಗ ರಿ | ಸ ನಿ ದ ಸ | ದ ಪ ಮ ಗ | ರಿ ಸ ರಿ ಮ ||

4 || ದಾ ; – ದ | ; – ಮ ಪ ದ | – ಸ ನಿ ದ ಪ | – ಮ ಗ ರಿ ಸ | ರಿ ; ; – ಸ | ನಿ ಧ – ರಿ ಸ | ಮ ರಿ – ಪ ಮ | ದ ಪ ಮ ಪ ||
|| ದ ಸ ದ ಪ | ; ಮ – ಪ ದ | ಪ ಮಾ ಗ | ರಿ ಪ ಮ ಗ | ರಿ ಸ ನಿ ಧ | ; ಸ – ರಿ ಮ | ಗ ರಿ – ಸ ರಿ | ಮ ಮ ಪಾ ||
|| ಮ ಗ ರಿ – ಸ | ರಿ ಮ – ಪ ಮ | ಗ – ರಿ ಮ ಪ | ದ ಪ ಮ ಪ | ದ ಪ ದ – ಮ | ಪ ಮ ಗ ರಿ | ಮ ಮ – ಪ ಪ | ದ ದ ಸ ; ||
|| ಸ ದ ಸ – ಸ | ; ರಿ – ಸ ರಿ | ಮ ಗ ರಿ – ಸ | ರಿ ; ಸ ನಿ | ದ ಸ ; – ನಿ | ದ ಪ – ಪ ಪ | ; ಮ ಗ ರಿ | ಧ ಸ ರಿ ಮ ||

# ಸಂಪೂರ್ಣ ಚರಣ.

| | | | | | | | |
|---|---|---|---|---|---|---|---|
| ಪಾ ದಾ | ಪಾ ; ; | ದ ಪ ಮ ಗ | ರಿ ಮ ಪ ದ | ದಾ – ದ ರಿ̇ | ಸ̇ ನಿ ದ ಪ | ದ ಪ – ಮ ಗ | ರಿ – ಸ ರಿ ಮ |
| ನೀ – | ಪೈ – – | ಮ – ರು – | ಲ – – – | ದಾ ಚ – | – – – – | ಜಾ – ಲ – | – ಕ – – |
| ಪ ಪ ಮ ಗ | ರಿ ರಿ–ಮ ಗ | ರಿ ರಿ–ಸ ಸ | ರಿ ಸ ನಿ̣ ಧ̣ | ರಿ ಸ ರಿ – ಸ | ರಿ–ಮ ಗ ರಿ | ಪ ಮ ಗ ರಿ | ಮ ಮ ಪಾ |
| ತಾ – – – | ಪ – ಮೊಂ | – – – ದಿ | ಯು– – – | ನ್ನ – – – – | – – – – | ವ – – – | ನಿ – ತ – |
| ದ ಪ ಮ ಗ | ರಿ ಮ–ಸ̇ ದ | ಪ ಮ ಪ ದ | ರಿ̇ ಸ–ನಿ ದ | ಸ ಸ ರಿ̇ – ಸ | ರಿ̇ ಸ ನಿ ದ | ಸ̇ ನಿ–ದ ರಿ̇ | ರಿ̇ ; ; |
| ದಾ – – – | ಪು – ಜೇ – | – ರ್ಚಿ – – | ಮ – ದಿ – | ಚ – – – ಲ್ಲ | – – – – | ಜೇ– – – | ಸಿ – – |
| ರಿ̇ ಸ ರಿ̇ – ಮ̇ | ಗ ರಿ – ಸ ರಿ̇ | ಸ̇ನಿ ದ – ಮ | ಪ ದ ಸ̇ ರಿ̇ | ಪ ದ ಸ̇ – ಮ | ಪ ದ – ಮ ಪ | ಮ ಗ ರಿ ಸ̣ | ಧ̣ ಸ̣ ರಿ ಮ |
| ಕಾ – ಪಾ | – ಡ – – | ರ – – ಶ್ರೀ | – – – – | ಪ – – ದ್ರ | – – – ಪು | ರಿ – – – | ವಾ – – |

**ಸೂಚನೆ—ಚಿಟ್ಟೆಸ್ವರವನ್ನು** ಹಾಡಿದ ನಂತರ ಪಲ್ಲವಿಯನ್ನು ಹಾಡಿ ಮುಗಿಸುವುದು ಈ ವರ್ಣದ ಸಂಪ್ರದಾಯ.

**4—ರಾಗ** — ಆನಂದ ಭೈರವಿ(20 ನೇ ನಠಭೈರವೀ ಮೇಳದಲ್ಲಿ ಭಾಷಾಂಗಜನ್ಯ) **ತಾಳ** — ಆದಿ.

**ಆರೋಹಣ** — ಸ ಗ$_2$ ರಿ$_2$ ಗ$_2$ ಮ$_1$ ಪ ದ$_2$ ಪ ನಿ$_2$ ಸ . **ಅವರೋಹಣ** — ಸ ನಿ$_2$ದ$_2$ಪ ಮ$_1$ ಗ$_2$ ರಿ$_2$ ಸ .

**ಪಲ್ಲವಿ**—ನಿನ್ನು ನಮ್ಮಿನ ಮಗುವಪ್ಪೈ ನೆನರುಂಚಿ ವೇಗ ನೇಲುಕೊನರಾ. **ಅನುಪಲ್ಲವಿ**—ಕನ್ನವಾರನ್ನ ಮಾಟಲ ವಿನಿ |ಕನ್ನಪ್ಪೈ ಛಲಮು ಜೂಪಕುರಾ||
**ಚರಣ**—ಚಿದ್ನನಾಟನುಂಡಿ ಗಾಚಿ | ಯುನ್ನದೆರಿಗಿ ನೀವಿಟು||ಖಿನ್ನಪರಚ ದಗುನೇರಾ | ವನ್ನಿಕಾರ ಪದ್ಮಪುರಿ ವರದಾ||

## ಪಲ್ಲವಿ

| | | | | | | | |
|---|---|---|---|---|---|---|---|
| ಪ ದ_ಮ ಪ | ಮಾ ॰ ॰ | ಮ ಗ ಪ ಮ | ಗ ರಿ ಗ ಮ | ಮ ಗ ಮ_ದ | ಪ – ಪ ಮ ಗ | ಮ ಪಾ – ಪ | ಮ – ಗ ರಿ ಸ |
| ನಿ – ನ್ನು – | ನಂ – – | ಮಿ – – – | ನ – – – | ಮ – – ಗು | – ವ – – | ಪೈ – – – | – – – – – |
| ನಿ ಸ ನಿ – ಸ | ;; ರಿ – ನಿ॰ | ಸ ಗ ರಿ – ಗ | ॰ ಗ ಮಾ | ಪ ನಿ ದ_ಪ | ॰ ದ ಪ ಮ | ಮ ಗ_ಪ ಮ | ಗ ರಿ_ಗ ಮ |
| ನೆ – – – | – – ರುಂ | ಚಿ – – ವೇ | – ಗ – | ನೇ – – ಲು | – – – – | ಕೊ – ನ – | ರ – – – |

## ಅನುಪಲ್ಲವಿ

| | | | | | | | |
|---|---|---|---|---|---|---|---|
| ಮ ಪ ಸ ನಿ | ದ – ದ ಪಾ | ದ ಪ_ಮ ಗ | ರಿ – ಗ ಮ ಪ | ಪ ಮ ಪ_ನಿ | ದ_ದ ಪ ಮ | ಮ ಪ ಸ ನಿ | ಸಾ ॰ ॰ |
| ಕ – ನ್ನ – | – ವಾ – | ರ – – – | – ನ್ನ – – | ಮಾ – – ಟ | – ಲ – – | ವಿ – – – | ನಿ – – |
| ಸ ನಿ ಸ ಗ | ರಿ ನಿ ಸ ಮ | ಗ ರಿ – ಗ ರಿ | ಸ ರಿ ನಿ ಸ | ಪ ಸ ॰ ನಿ | ದ – ದ ಪ | ಮ ಗ ರಿ – ಸ | ಗ ರಿ ಗ ಮ |
| ಕ – – ನ್ನೈ | – – ಪೈ – | – – ಚ – | ಲ – ಮು | ಜೂ – – | – ಪ – | ಕು – – ರ | – – – – |

## ಚಿಟ್ಟೆ ಸ್ವರ

|| ಪಾ ದ ಪ | ಮ ಗಾ ಗ | ಮ ಪಾ — ಪ | ಮ ಗ ರಿ ಸ | ಸಾ ನಿ — ಗ | ರಿ ಗ ಮಾ | ಪ ಮ ಗ ರಿ | e ಗ ಮ ಪ ||

|| ಪಾ ದ ಪ | ಪ ಸ ನಿ ಸ | ಸ e ಮ ಗ | ರಿ — ಸ ರಿ ನಿ | ಸ ರಿ ಸ e | ನಿ ದ — ಪ ದ | ಪಾ — ಮ ಗ | ರಿ e ಗ ಮ ||

## ಚರಣ

|| ದ ಪ ಮ ಪ | ಸ e e ನಿ | ರಿ ಸ ನಿ ದ | ಪಾ e e | ದ ಪ — ನಿ ದ | ಪ — ದ ಪ ಮ | ಗ ಪಾ — ಗ | ರಿ ಗ ಮ ಪ ||
|| ಚಿ — — — | ನ್ನ — — — | ನಾ — — — | ಟ — — | ನುಂ — — | — ಡಿ — — | ಗಾ — — | ಚಿ — — — ||

1\. || ದಾ e e | e e — ಪಾ | ಗಾ ಮಾ | e e ಗಾ | ರಿ e ನಿ e | ಸಾ ಗಾ | ರಿ e ಗಾ | ಮಾ ಪಾ ||

2\. || ದಾ ಪ ಮ | ಪಾ ಗ ಮ | ದ ಪಾ — ಪ | ಮ ಗ ರಿ ಗ | ಸ e ಸ — ಸ | ಗ ರಿ ನಿ e | ಸ ಗ ರಿ — ಗ | e ಗ ಮ ಪ ||

3\. || ಪ ದ ಪ ಪ | ಮ ಗ ಮ ಪ | ಮ ಗ ಮ ಪ | ಪ ಮ ಗ ರಿ | ಮ ಗ ರಿ — ಗ | ರಿ — ಸ ರಿ ನಿ | ಗ ರಿ ಮ ಗ | ಪ ಮ ಗ ಮ ||

|| ಪ ಮ ಪ ಸ | ನಿ ಸ ಗ ರಿ | ಮ ಗ ರಿ — ಸ | ಗ ರಿ — ಸ ನಿ | ದ — ಪ ಸ ನಿ | ದ ಪ ಪ ಮ | ಗ ರಿ ಸ — ಗ | ರಿ — ಗ ಮ ಪ ||

4\. || ಸ e e — ಸ | e — ರಿ ಸ ನಿ | ದ ಪ — ದ ಪ | ಮ ಗ ರಿ ಗ | ಸ e e e — ಸ | e — ನಿ ಗ ರಿ | ಮ ಗ ಪ ಮ | ದ ಪ ಮ ಪ ||

|| ಸ ನಿ ದ ಪ | e ಮ — ದ ಪ | ಮ — ಗಾ ಗ | ಮ ಪ ಗ ರಿ | ಸ ರಿ ಸ — ನಿ | e — ದ ಗ ರಿ | ನಿ e — ಗ ರಿ | ಗಾ — ಮ ಪ ||

|| ಪ ಮ ಗ ರಿ | ಗ ಮ ಪ — ರಿ | ಗ ಮ ಪ — ಸ | ಗ ರಿ ಗ ಮ | ಪ — ನಿ ಸ ಗ | ರಿ ಗ ಮ ಪ | ನಿ ದ ಪ — ಮ | ಪ — ಸ ನಿ ಸ ||

|| ಸ ನಿ ಸ ಗ | ರಿ ನಿ — ಸ ಗ | ರಿ ನಿ — ಸ ಗ | ಗ ಮ — ಗಾ | ಗ ರಿ — ಸ e | ನಿ ದ — ಪಾ | ಮ ಪ — ಗಾ | ರಿ — ಗ ಮ ಪ ||

## ಸಂಪೂರ್ಣ ಚರಣ

| | | | | | | | |
|---|---|---|---|---|---|---|---|
| ದ ಪ ಮ ಪ | ಸ ಽ ಽ ನಿ | ರಿ ಸ ನಿ ದ | ಪಾ ಽ ಽ | ದ ಪ – ನಿ ದ | ಪ – ದ ಪ ಮ | ಗ ಪಾ – ಗ | ರಿ ಗ ಮ ಪ |
| ಚಿ – – – | ನ್ನ – – – | ನಾ – – – | ಟ – – | ನು ಂ – – | – ಡಿ – – | ಗಾ – ಚಿ | – – – – |
| ದ ಪ – ಪ ಮ | ಗ – ಮ ಪ ಮ | ಮ ಗ ರಿ ಪ | ಮ ಗ ರಿ ಸ | ನಿ ಸ ಽ ನಿ | ಸ ಗ ರಿ ಸ | ನಿ ಸ ಮ ಗ | ರಿ ಗ ಮ ಪ |
| ಯು – – | – ನ್ನ – – | ದೆ – – ರಿ | – – – – | – – – ಗಿ | – – – – | ನೀ – – | – – – – |
| ದ ಪ ಮ ಗ | ಮ ಪ – ನಿ ದ | ಪ ಮ ಗ ಮ | ಗ ರಿ ಗ ಮ | ಸ ಗ ರಿ – ಪ | ಮ ಪ ದ ಪ | ಮ ಪ ಸ ನಿ | ಸ ಽ ಽ ಽ |
| ಖಿ – – – | ನ್ನ ಪ – | – – ರ – | ಚೆ – – – | ದ – – – | – – – – | ನೇ – – – | ರಾ – – – |
| ದ ಪ ಪ – ಸ | ಽ ನಿ – ಸ ಮ | ಽ ಗ ರಿ – ಸ | ರಿ ನಿ ಸ ಽ | ಪ ರಿ ಸ – ನಿ | ದ – ಪ ದ ಪ | ಮ ಗ ರಿ – ಸ | ಗ ರಿ ಗ ಮ |
| ವ – – ನ್ನೆ | – – ಕಾ | – ಡ – ಪ | – ದ್ಮ – – | ಪು – – ರೀ | – ವ – – | ರ – – ದ | – – – – |

ಸೂಚನೆ— ಚಿಟ್ಟೆಸ್ವರವನ್ನು ಮತ್ತೆ ಹಾಡಿಕೊಂಡು ಪಲ್ಲವಿಯನ್ನು ಹಾಡಿ ಮುಗಿಸುವುದು ಈ ವರ್ಣದ ಸಂಪ್ರದಾಯ.

**5. ರಾಗ – ನಾಗಸ್ವರಾವಳಿ** (28ನೇ ಹರಿಕಾಂಬೋಜಿ ಮೇಳದಲ್ಲಿ ಉಪಾಂಗ ಜನ್ಯ) **ತಾಳ–ಆದಿ**

**ಆರೋಹಣ**–ಸ ಗ$_3$ ಮ$_1$ ಪ ದ$_2$ ಸ. **ಅವರೋಹಣ**–ಸ ದ$_2$ ಪ ಮ$_1$ ಗ$_3$ ಸ.

**ಪಲ್ಲವಿ** || ಸಾಮಿ ನೀವೇಯನಿ | ಕಾಮಿನಿ ನಮ್ಮಿನದಿರ – **ಅನುಪಲ್ಲವಿ** || ಭೂಮಿ ನೇಲು ಪದ್ಮಪುರಿ | ಶ್ರೀಮಂತುಡೈನ ವರದ ||

**ಚರಣ** || ಭಾಮ ನೀಕೇ ದಗಿನ | ಧೀಮಂತಿಯುಗ ಸುತಿರಾ – ನಾ ಮನವಿನಾಲಗಿಂಚಿ | ಪ್ರೇಮಜೂಪಿ ವೇಗ ನೇಲುಕೊನರಾ.

## ಪಲ್ಲವಿ

| | | | | | | | |
|---|---|---|---|---|---|---|---|
| ಸ , , – ಸ | ದ ಪ ಮಾ | ಪ ದ ಸ – ಪ | ದ ಪ – ಮ ಗ | ಮಾ , – ಮ | ಪ – ಮ ಗ ಸ | ಗ ಮಾ–ಮ | ಪಾ – ಪ ದ |
| ಸಾ – – | – – ಮಿ | – – – – | – – – – | ವೇ – – – | – – – – – | ಯ – – | – ನಿ – |
| ಸ ದ ಪ–ಮ | ಪ ದ–ದ ಪ | ಮ–ಗ ಮ ಪ | ಮ ಗ ಸ ದ | ಸ ಗ–ಗ ಮ | , ಗ – ಮ ಪ | ಪ ದ , ಪ | , ಮ ಪ ದ |
| ಕ – – ಮಿ | – – ನಿ – | – ನಂ – – | ಮಿ – – – | ನ – – – | – – ದಿ – | – – – – | – ರ – – |

## ಅನುಪಲ್ಲವಿ

| | | | | | | | |
|---|---|---|---|---|---|---|---|
| ದಾ , – ದ | ಪ ಮ ಪ ದ | ಮ ಪ ಮ ದ | ಪ ಪ ಮ ಗ | ಮ ಪ , – ದ | ಪ ಮ–ಗ ಮ | ಪ ಪ ದ ದ | ಸ , , , |
| ಭೂ – – | – ಮಿ – – | ನೇ – – – | ಲು – – – | ಪ , – ದ್ಮ | – – – – | ಪು – – – | ರಿ – – – |
| ದ , , – ಸ | ದ ಸ – ದ ಸ | ದ ಸ ಗ ಮ | ಗ ಸ – ಮ ಗ | ಸ , , – ಸ | ದ ಮ ಪ ದ | ಪ , , – ಗ | , – ಮ ಪ ದ |
| ಶ್ರೀ – – ಮಂ | – – – – | ತು – – – | – – ಡೈ – | ನ – – ವ | – ರ – – | ದ – – – | – – – – |

### ಚಿಟ್ಟೆಸ್ವರ

|| ಸ ; ; – ಸ | ಧ ಪ ದ ಸ | ಮ ಪ – ಮ ದ | ಪ – ಮ ಪ ಗ | ಮಾ ; – ಪ | ಮ ಗ – ಸ ಗ | ಮ ಪಾ – ಮ | ಗ ಮ ಃ ದ
|| ಸ ದ ಪ – ದ | ಸ – ಪ ದ ಸ | ಪ ಸ ಗ ಮ | ಗ ಸ – ದ ಸ | ಗ ಸ ; – ದ | ಪ ಮ – ಪಾ | ; – ಮ ಗ ಸ | ಗಾ ಮ ಪ

### ಚರಣ

|| ಪಾ ; ; | ; ; ಮ ಪ | ದ ಪ – ಮ ಪ | ಮ ಗ – ಮಾ | ಗ ಮ ಸಾ | ಮ ಪ ದಾ | ಮಾ ಪಾ | ; ದ ಪ ಮ ||
|| ಭಾ – – | – – ಮ – | – – ನಿ – | ಕೇ – – | ದ – – | – – – | ಗಿ – | – ನ – – ||

1. || ಪಾ ಆ | ; ; ಗಾ | ; ; ಮಾ | ; ; ಗಾ | ; ; ಸಾ | ; ; ಮಾ | ; ; ಗಾ | ; ; ಮಾ ||

2. || ಪಾ ; ದ | ಷ – ಮ ಗ ಮ | ದ ಪಾ – ಪ | ಮ ಗ ಸ ಗ | ಮಾ ; – ದ | ಪ ದ – ಪಾ | ದ ಸ ; – ದ | ಪ ಮ ಗ ಮ ||

3. || ಪ ದ ಪ ಮ | ಗ ಮ – ದ ಪ | ಮ ಗ ಸ ಪ | ಮ ಗ ಸ – ಮ | ಗ ಸ – ದ ಸ | ಗ ಸ – ಗ ಮ | ದ ಪ ಮ ಗ | ಸ ಮ ಗ ಮ ||
|| ಪ ಮ ಗ – ಸ | ಗ ಮ ಪ ದ | ಸ ದ ಪ ದ | ಸ ಗ ಮ ಗ | ಸ – ಸ ದ ಪ | ಮ ಗ – ದ ಪ | ಮ ಗ ಸ – ಮ | ಗ – ಸ ಗ ಮ ||

4. || ಸ ; ; ಸ | ; ; – ಸ ದ | ಪ – ದ ಪ ಮ | ಪ ಮ ಗ ದ | ಸಾ ; ಸ | ; – ಮ ಗ ಸ | ಮ ಗ ಮ – ಪ | ಮ ದ ಪ ದ ||
|| ಸ ದ ಪ – ಮ | ; ಷ – ಗ ಮ | ದ ಪ – ಮ ಗ | ; ಪ ಮ ಗ | ಸ ದ – ಸ ಮ | ; ಗ – ಪ ಮ | ದ ಪ ಮ ಪ | ಗ ಮ ಪ ದ ||
|| ಪ ಮ ಗ ಸ | ಗ ಮ – ದ ಪ | ಮ ಗ ಸ – ಸ | ದ ಪ ಮ ಗ | ಸ ಗ – ಗ ಮ | ಮ ಪ – ಪ ದ | ಮ ಪ ಗ ಮ | ದ ದ ಸ ; ||
|| ಸ ದ ಸ – ಗ | ಮ ಗ – ಸ ಗ | ಮ ಗ ಸ – ದ | ಸ ದ ಪ ದ | ದ ಸ ಪಾ | ಪ ದ ಗಾ | ಪ ಗ ಮಾ | ; ಸ ಗ ಮ |

### ಸಂಪೂರ್ಣ ಚರಣ

|| ಪಾ ; ; | ; ; – ಮ ಪ | ದ ಪ – ಮ ಪ | ಮ ಗ ಮಾ | ಗ ಮ ಪಾ | ಮ ಪ ದಾ | ಮಾ ಪಾ | ; ದ ಪ ಮ ||
|| ಭಾ – ; | – – ಮ – | – – ನಿ – | ಕೆ – – | ದ – – | – – – | ಗೀ – | – ನ – – ||

| | | | | | | | |
|---|---|---|---|---|---|---|---|
| ದಾ ಪ ಮ | ಗ ಮ – ಪಃ | ಮ ಗ ಸ ಗ | ಪ ಮ ಗ ಸ | ಮ ಗ ಸ–ಮ | ಗ–ಮ ಪ ಮ | ದ ಪ ಮ ಗ | ಪ ದ ಸ̇ ೯ |
| ದೀ – – | – – –ಮಂ | – – – – | ತಿ – – – | ಯ – – ಗು | – – – – | ಸ – – – | ತಿ – – ರಾ |
| ಸ̇ ೯ – ದ ಪ | ದ ಸ–ಪ ದ | ಸ̇ – ಮ ಪ ದ | ಸ̇ – ಗ ಮ ಪ | ದ ಸ̇ – ಸ ಗ | ಮ ಪ ದ ಸ̇ | ದ ಸ̇ ಗ ಸ̇ | ಗ ೯ ೯ ಗ |
| ನಾ – – | – – ಮ – | – – ನ – – | – ವಿ – – | – – ನಾ – | – – – – | ಲ – – – | ಗಿಂ – – ಚಿ |
| ಸ̇ ೯ ಮ | ಗ ಸ̇ – ಸ̇ ೯ | ೯ ಸ̇ ದ ಪ | ಗ ಮ ಪ ದ | ಸ̇ – ಸಾ ದ | ಪ ಮ – ಪಾ | ಮ ಗ ಸ–ಗ | ೯ ಮ ಪ ದ |
| ಪ್ರೇ – ಮ | – – – ಚೂ | ಪಿ – – – | ವೆ – – – | ಗ ನೇ ಲು | – – ಕೋ | – – – ನ | – – ರ – |

ಸೂಚನೆ—ಚಿಟ್ಟೆಸ್ವರವನ್ನು ಹಾಡಿದ ನಂತರ ಪಲ್ಲವಿಯನ್ನು ಹಾಡಿ ಮುಗಿಸುವುದು ಈ ವರ್ಣದ ಸಂಪ್ರದಾಯ.



**6–ರಾಗ** – ಷಣ್ಮುಖಪ್ರಿಯ (56ನೇ ಮೇಳಕರ್ತ ರಾಗ) **ತಾಳ–ಆದಿ**

**ಆರೋಹಣ**–ಸ ರಿ$_2$ ಗ$_2$ ಮ$_2$ ಪ ದ$_1$ ನಿ$_2$ ಸ̇. **ಅವರೋಹಣ**–ಸ̇ ನಿ$_2$ ದ$_1$ ಪ ಮ$_2$ ಗ$_2$ ರಿ$_2$ ಸ

**ಪಲ್ಲವಿ** ‖ ಪಂಕಜಾಕ್ಷಿಪೈ ನೆನರುಂಚಿ | ಪೊಂಕಿಂಚಿ | ವೇಗ ನೇಲುಕೊನುಮ ‖ **ಅನುಪಲ್ಲವಿ** ‖ ಶಂಕುಚಕ್ರಧರ ಪದ್ಮಪ್ರೀಶ | ಬಿಂಕಮೆಲ್ಲನಿಕ | | ಮಾನುಕೊನುಮ ‖ **ಚರಣ** ‖ ಬಂಗಾರು ಬೊಮ್ಮಯನಂದಗಿನ | ಅಂಗನಮಣಿ ಮನೋರಥಮು ‖ ಭಂಗ ಪರಚಕ ಯು | | ಪ್ಪೊಂಗಿಂಚಿ ಕೇಳಿ ಸಲುಪುಮ ‖

**ಪಲ್ಲವಿ**

| | | | | | | | |
|---|---|---|---|---|---|---|---|
| ಪಾ ಮಾ | ಪ ಮ ಗಾ | ರೀ ಗ ರಿ | ರಿ ೯ ೯ ೯ | ಸ ಸ – ರಿ ರಿ | ಗ ಗ – ರಿ ಸ | ನಿ̣ ಸ ಧ̣ – ನಿ̣ | ಸ – ರಿ ಗ ಮ |
| ಪಂ – | ಕ – – | ಜಾ – – | ಕ್ಷಿ – – – | ಪೈ – – – | – – – – | ನೆ – – ನ | – – ರುಂಚಿ |

